


# ಕರ್ನಾಟಕ ನಾಣ್ಯ ಸಂಪತ್ತು

ಡಾ. ಎ. ವಿ. ನರಸಿಂಹಮೂರ್ತಿ




ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ನೃಪತುಂಗ ರಸ್ತೆ
ಬೆಂಗಳೂರು-೫೬೦ ೦೦೨

ಡಾ. ಎ. ವಿ. ನರಸಿಂಹಮೂರ್ತಿ ಅವರಿಂದ ರಚಿಸಲ್ಪಟ್ಟ 'ಕರ್ನಾಟಕ ನಾಣ್ಯ ಸಂಪತ್ತು' ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯದವರಿಂದ ಪ್ರಥಮ ವಿಶ್ವ ಕನ್ನಡ ಸಮ್ಮೇಳನದ ಸಂದರ್ಭದಲ್ಲಿ (ಜನವರಿ ೧೯೮೩) ಐಬಿಎಚ್ ಪ್ರಕಾಶನದವರ ಕೃಪೆಯಿಂದ ಪ್ರಕಟಿಸಲ್ಪಟ್ಟಿದ್ದು.

KARNATAKA NAANYA SAMPATTHU— a monograph on Numismatics of Karnataka written by Dr. A. V. Narasimhamurthy. Published by The Directorate of Kannada and Culture, Government of Karnataka, 14/3A Nrupathunga Road, Bangalore-560 002, on the occasion of the *FIRST WORLD KANNADA CONFERENCE (January 1983)* by the Courtesy of IBH Prakashana, Gandhinagar, Bangalore-560 009.



ಬೆಲೆ ರೂ. ೨-೦೦

ಮುಖಚಿತ್ರ : ಎಲ್. ಎಸ್. ಎನ್. ಆಚಾರ್
ರೇಖಾಚಿತ್ರಗಳು : ಎಚ್. ಆರ್. ರಘುನಾಥಭಟ್

ಮುದ್ರಕರು : ಎಚ್. ಎಸ್. ಎನ್. ರಾವ್, ಐಬಿಎಚ್ ಪ್ರಕಾಶನ ಪ್ರಿಂಟರಿ,
ಬೆಂಗಳೂರು-೫೬೦ ೦೦೯

# ಕರ್ನಾಟಕ ನಾಣ್ಯ ಸಂಪತ್ತು

ನಾಣ್ಯಗಳನ್ನು ನೋಡದವರು ಮತ್ತು ಬಳಸದವರು ಯಾರು? ಪ್ರತಿಯೊಬ್ಬರಿಗೂ ಅವುಗಳ ನಿಕಟ ಸಂಪರ್ಕವಿದ್ದೇ ಇರುತ್ತದೆ. ಅದರಲ್ಲಿಯೂ ಮಕ್ಕಳಿಗೆ ಅವುಗಳನ್ನು ಕಂಡರೆ ವಿಶೇಷ ಪ್ರೀತಿ. ಅದರಿಂದ ಅವರು ತಮಗೆ ಪ್ರಿಯವಾದ ಪದಾರ್ಥಗಳನ್ನು ಕೊಳ್ಳುತ್ತಾರೆ. ಹೀಗೆ ನಾಣ್ಯಗಳ ಪರಿಚಯ ಎಲ್ಲರಿಗೂ ಇದ್ದರೂ, ಅವುಗಳ ಇತಿಹಾಸ ಮತ್ತು ಪರಂಪರೆಯನ್ನು ತಿಳಿದಿರುವವರು ಬಹು ಕಡಿಮೆ. ಕರ್ನಾಟಕದಲ್ಲಿ ಸುಮಾರು ಎರಡು ಸಾವಿರ ವರ್ಷಗಳಿಂದ ನಾಣ್ಯಗಳು ಬಳಕೆಯಲ್ಲಿವೆ. ಇದರಿಂದ ಕರ್ನಾಟಕ ನಾಣ್ಯ ಸಂಪತ್ತು ವಿಪುಲವಾಗಿದೆ ಎಂಬುವುದು ತಿಳಿಯುತ್ತದೆ. ಈ ನಾಣ್ಯ ಸಂಪತ್ತಿನ ಪರಿಚಯವನ್ನು ಈ ಮುಂದಿನ ಪುಟಗಳಲ್ಲಿ ಮಾಡಿಕೊಳ್ಳೋಣ.

ನಮ್ಮ ದೇಶದ ನಾಣ್ಯ ಸಂಪತ್ತನ್ನು ಕುರಿತು ಅಧ್ಯಯನ ಮತ್ತು ಸಂಶೋಧನೆಗಳನ್ನು ಮಾಡಿದ ವಿದ್ವಾಂಸರುಗಳನ್ನು ನೆನೆಯುವುದು ನಮ್ಮ ಕರ್ತವ್ಯ. ರ್‍ಯಾಪ್‌ಸನ್, ಅಲೆನ್, ಸ್ಮಿತ್, ಭಂಡಾರಕರ್, ಅಳತೇಕರ್, ಕನಿಂಗಹ್ಯಾಮ್, ಗುಪ್ತ ಮುಂತಾದ ವಿದ್ವಾಂಸರು ಭಾರತೀಯ ನಾಣ್ಯಗಳನ್ನು ಕುರಿತು ಮಹದ್ಗ್ರಂಥಗಳನ್ನು ರಚಿಸಿದ್ದಾರೆ. ಕರ್ನಾಟಕದ ನಾಣ್ಯಗಳ ವಿಷಯದಲ್ಲಿ ಆರ್. ನರಸಿಂಹಾಚಾರ್ ಮತ್ತು ಎಂ. ಎಚ್. ಕೃಷ್ಣ ಬಹುವಾಗಿ ಕೆಲಸಮಾಡಿದ್ದಾರೆ. ಈ ವಿದ್ವಾಂಸರುಗಳ ಸಂಶೋಧನೆಯಿಂದಾಗಿ ಕರ್ನಾಟಕ ನಾಣ್ಯ ಇತಿಹಾಸವನ್ನು ರಚಿಸಬಹುದಾಗಿದೆ. ಆದರೆ ಇನ್ನೂ ಅನೇಕ ರಾಜಮನೆತನಗಳ ಇಲ್ಲವೇ ರಾಜರ ನಾಣ್ಯಗಳು ಬೆಳಕಿಗೆ ಬರದೆ ನಾಣ್ಯ ಇತಿಹಾಸದಲ್ಲಿ ಅನೇಕ ಅರೆಕೊರೆಗಳಿವೆ. ಹಾಗಿದ್ದರೂ ನಮ್ಮ ದೇಶದ ಸಾಂಸ್ಕೃತಿಕ ಮತ್ತು ರಾಜಕೀಯ ಇತಿಹಾಸ ರಚನೆಯಲ್ಲಿ ಅವು ಪ್ರಮುಖ ಪಾತ್ರವನ್ನು ವಹಿಸಿವೆ.

ನಾಣ್ಯಗಳು ಇತಿಹಾಸವನ್ನು ರಚಿಸುವಲ್ಲಿ ಉತ್ತಮ ಸಾಧನಗಳೂ ಆಗಿವೆ. ನೋಡಲು ಸಣ್ಣವಾಗಿದ್ದರೂ ಅವುಗಳು ತಿಳಿಸುವ ಇತಿಹಾಸ ವಿಷಯಗಳು ಮಹತ್ವವಾದವು. ಸಾಹಿತ್ಯ ಗ್ರಂಥಗಳು ಮತ್ತು ಶಾಸನಗಳು ತಿಳಿಸುವ ಇತಿಹಾಸ ವಿಷಯಗಳನ್ನು ಸ್ಪಷ್ಟೀಕರಿಸಲೂ ನಾಣ್ಯಗಳು ಬಹು ಮುಖ್ಯವಾದ ಸಾಧನಗಳು. ಭಾರತದೇಶದ ವಿಷಯವನ್ನೇ ತೆಗೆದುಕೊಂಡು ಹೇಳುವುದಾದರೆ, ಇಂಡೊಗ್ರೀಕ್, ಬ್ಯಾಕ್ಟ್ರಿಯನ್ ಮುಂತಾದ ರಾಜಮನೆ ತನಗಳ ಚರಿತ್ರೆಯನ್ನು ತಿಳಿಯಲು ಅವರ ನಾಣ್ಯಗಳೇ ಆಧಾರಗಳು. ಅವು ಗಳು ನಮಗೆ ದೊರೆಯದೇ ಹೋಗಿದ್ದರೆ ಆ ಮನೆತನಗಳ ರಾಜಕೀಯ ಇತಿಹಾಸ ನಮಗೆ ತಿಳಿಯುತ್ತಲೇ ಇರಲಿಲ್ಲ. ಗುಪ್ತರ ಕಾಲವನ್ನು ನಾವು ಭಾರತೀಯ ಇತಿಹಾಸದ ಸ್ವರ್ಣಯುಗವೆಂದು ಕರೆಯುತ್ತೇವೆ. ಆ ಕಾಲದಲ್ಲಿ ಗುಪ್ತರು ಅಚ್ಚು ಹಾಕಿಸಿದ ಚಿನ್ನದ ನಾಣ್ಯಗಳನ್ನು ನೋಡಿದರೆ, ಆ ಕಾಲವು ಎಷ್ಟೊಂದು ಸಂಪದ್ಭರಿತವಾಗಿದ್ದಿತು ಮತ್ತು ಆರ್ಥಿಕವಾಗಿ ಮುಂದುವರೆದಿದ್ದಿತು ಎಂಬುದು ತಿಳಿದುಬರುತ್ತದೆ. ದೇಶದಲ್ಲಿ ಕ್ಷಾಮಡಾಮರಗಳಿದ್ದಾಗ ಆ ಕಾಲದ ನಾಣ್ಯಗಳು ತಾಮ್ರ, ಸೀಸ ಮುಂತಾದ ಲೋಹಗಳಲ್ಲಿ ವಿಶೇಷ ವಾಗಿರುತ್ತವೆ. ಅಂದರೆ ನಾಣ್ಯಗಳು ಒಂದು ಕಾಲದ ಆರ್ಥಿಕ ಸ್ಥಿತಿಗತಿ ಗಳನ್ನು ಪ್ರತಿಬಿಂಬಿಸುವ ಸಾಧನಗಳಾಗಬಲ್ಲವು. ಇದೇ ರೀತಿಯಲ್ಲಿ ಇವು ಗಳು ಒಂದು ದೇಶದ ಧಾರ್ಮಿಕ ಸ್ಥಿತಿಯನ್ನು ತಿಳಿಸಲೂ ಸಹಾಯಕವಾಗು ತ್ತವೆ. ಕುಷಾಣ ರಾಜರ ನಾಣ್ಯಗಳು ಇದಕ್ಕೆ ಉತ್ತಮ ಉದಾಹರಣೆ. ಶಿವ, ಬುದ್ಧ, ಸೂರ್ಯ ಮುಂತಾದ ಚಿತ್ರಗಳುಳ್ಳ ಕುಷಾಣರ ನಾಣ್ಯಗಳು ಆ ಕಾಲದಲ್ಲಿದ್ದ ಧಾರ್ಮಿಕ ಮತ್ತು ಮತೀಯ ಭಾವನೆಗಳನ್ನು ತಿಳಿಸುತ್ತವೆ. ಮೈಸೂರು ಒಡೆಯರ್ ಮನೆತನದ ರಾಜರುಗಳು ಅವರ ನಾಣ್ಯಗಳಲ್ಲಿ ವಿಶೇಷವಾಗಿ ಚಾಮುಂಡಿಯ ಚಿತ್ರಗಳನ್ನು ಹಾಕಿಸಿದರು. ಇದರಿಂದ ಈ ರಾಜರುಗಳಿಗೆ ಚಾಮುಂಡೇಶ್ವರೀ ದೇವಿಯಲ್ಲಿದ್ದ ಭಕ್ತಿ ವ್ಯಕ್ತವಾಗುತ್ತದೆ. ಒಟ್ಟಿನಲ್ಲಿ ಹೇಳುವುದಾದರೆ ನಾಣ್ಯಗಳು ಭಾರತೀಯ ಚರಿತ್ರಕಾರನಿಗೆ ಉತ್ತಮ ಸಾಮಗ್ರಿಗಳನ್ನು ಒದಗಿಸುತ್ತವೆ.

## ನಾಣ್ಯಗಳ ಪ್ರಾಚೀನತೆ

ನಮ್ಮ ದೇಶದಲ್ಲಿ ನಾಣ್ಯಗಳು ಯಾವಾಗ ಪ್ರಾರಂಭವಾದವು ಎಂಬುದನ್ನು ಗಮನಿಸೋಣ. ನಮ್ಮ ದೇಶದಲ್ಲಿ ಅತ್ಯಂತ ಪ್ರಾಚೀನವಾದ ಸಿಂಧೂ ನಾಗರಿಕತೆಯಲ್ಲಿ ನಾಣ್ಯಗಳು ದೊರಕಿಲ್ಲ. ಬಹುಶಃ ಆ ಕಾಲದಲ್ಲಿ ವ್ಯಾಪಾರವು ವಸ್ತುಗಳ ವಿನಿಮಯದಿಂದ ಸಾಗುತ್ತಿದ್ದಿತೆಂದು ತೋರುತ್ತದೆ. ವೈದಿಕ ಯುಗದ ಋಗ್ವೇದ ಕಾಲದಲ್ಲಿ ಹಸುಗಳನ್ನು ನಾಣ್ಯಗಳಿಗೆ ಬದಲಾಗಿ ಉಪಯೋಗಿಸುತ್ತಿದ್ದರು. ಹತ್ತು ಹಸುಗಳಿಗೆ ಒಂದು ಇಂದ್ರನ ವಿಗ್ರಹವನ್ನು ಮಾರಿದ ಪ್ರಸಂಗವೊಂದು ಋಗ್ವೇದದಲ್ಲಿ ಕಾಣುತ್ತದೆ. ಅಷ್ಟೇ ಅಲ್ಲದೆ ಆ ಕಾಲದಲ್ಲಿ ಒಬ್ಬ ಮನುಷ್ಯನ ಸಂಪತ್ತನ್ನು ಆತನು ಹೊಂದಿದ್ದ ಹಸುಗಳ ಮೇಲೆ ನಿರ್ಧರಿಸುತ್ತಿದ್ದರು. ಗೋಮೌಲ್ಯವು ಅನೇಕ ವಿಧದಲ್ಲಿ ಅನುಕೂಲವಾಗಿದ್ದರೂ ಸಣ್ಣ ಪುಟ್ಟ ಪದಾರ್ಥಗಳನ್ನು ಕೊಳ್ಳಲು ಉಪಯೋಗಕ್ಕೆ ಬರುತ್ತಿರಲಿಲ್ಲ. ಆದುದರಿಂದ ವೇದಗಳ ಕಾಲದ ಆರ್ಯರು ನಿಷ್ಕವೆಂಬ ಚಿನ್ನದ ಆಭರಣವನ್ನು ನಾಣ್ಯವಾಗಿ ಬಳಸಲು ಪ್ರಾರಂಭಿಸಿದರು. ನಿಷ್ಕವು ಒಂದು ರೀತಿಯ ಚಿನ್ನದ ಕಾಸುಗಳಿಂದ ಮಾಡಿದ ಸರವಿರಬಹುದೆಂದು ಊಹಿಸಲಾಗಿದೆ. ಸಣ್ಣ ಬೆಲೆಯ ಪದಾರ್ಥಗಳಿಗಾಗಿ ಈ ಕಾಸಿನ ಸರವನ್ನು ಬಳಸುವುದು ಕಷ್ಟ. ಆದುದರಿಂದ ಈ ಸರವನ್ನು ಅನೇಕ ಭಾಗಗಳನ್ನಾಗಿ ಮಾಡಿ ಸಣ್ಣ ಮೌಲ್ಯದ ನಾಣ್ಯಗಳಾಗಿ ಪರಿಗಣಿಸುವ ಪದ್ಧತಿಯು ಕಾಲಕ್ರಮದಲ್ಲಿ ಬೆಳೆಯಿತು. ಕೃಷ್ಣಲ, ಯವ, ತಂಡುಲ, ಮಾಷ ಮುಂತಾದ ಕಾಳುಗಳ ತೂಕದ ಚಿನ್ನವನ್ನು ನಾಣ್ಯವಾಗಿ ಬಳಸುವ ಪದ್ಧತಿಯು ಪ್ರಾರಂಭವಾಯಿತು. ಈ ರೀತಿಯ ನೂರು ಚಿನ್ನದ ಚೂರುಗಳನ್ನು ಸೇರಿಸಿ ಶತಮಾನವೆಂಬ ನಾಣ್ಯವನ್ನು ಅಳವಡಿಸಿಕೊಂಡರು. ಇವುಗಳನ್ನು ಯಜ್ಞಯಾಗಾದಿಗಳಲ್ಲಿ ಪುರೋಹಿತರಿಗೆ ದಕ್ಷಿಣೆಯಾಗಿ ಕೊಡುತ್ತಿದ್ದರು. ಪ್ರತಿಸಾರಿಯೂ ಚಿನ್ನವನ್ನು ತೂಕಮಾಡುವುದು ಕಷ್ಟದ ಕೆಲಸ. ಆದುದರಿಂದ ಈ ಚಿನ್ನದ ಚೂರುಗಳಿಗೆ ಯಾವುದಾದರೂ ಒಂದು ವಿಧವಾದ ಸಂಕೇತವನ್ನು ಮುದ್ರಿಸಿ, ಅದು ಸರಿಯಾದ ತೂಕವುಳ್ಳದ್ದು ಮತ್ತು ಶುದ್ಧವಾದ ಚಿನ್ನ ಹೊಂದಿರುವುದು ಎಂಬ ಸಮರ್ಥನೆಯನ್ನು ಮಾಡುವ ಪದ್ಧತಿಯು ಬೆಳಕಿಗೆ ಬಂದಿತು. ಇದೇ ನಾಣ್ಯಗಳಿಗೆ ನಾಂದಿಯಾಯಿತು. ನಮ್ಮ ದೇಶದಲ್ಲಿ ಈ ಪದ್ಧತಿಯು ಯಾವಾಗ ಪ್ರಾರಂಭವಾಯಿತು ಎಂದು ಹೇಳುವುದು ಕಷ್ಟವಾದರೂ,

ಸುಮಾರು ಕ್ರಿಸ್ತಪೂರ್ವ ಎಂಟನೆಯ ಶತಮಾನದ ಹೊತ್ತಿಗೆ ಚಿನ್ನದ ಚೂರುಗಳ ಮೇಲೆ ಮುದ್ರೆಗಳನ್ನು (ಪಂಚ್) ಒತ್ತಿ ನಾಣ್ಯಗಳನ್ನು ತಯಾರು ಮಾಡುತ್ತಿದ್ದರೆಂದು ಗೊತ್ತಾಗಿದೆ. ಇವೇ ನಮ್ಮ ದೇಶದ ಪ್ರಾಚೀನತಮ ನಾಣ್ಯಗಳು. ಇವುಗಳನ್ನು ಪಂಚ್‌ಮಾರ್ಕಿನ ನಾಣ್ಯಗಳು (ಮುದ್ರಾಂಕಿತ ನಾಣ್ಯಗಳು) ಎಂದು ಕರೆಯುತ್ತೇವೆ.

## ಮುದ್ರಾಂಕಿತ ನಾಣ್ಯಗಳು

ಕರ್ನಾಟಕದಲ್ಲಿ ನಾಣ್ಯಗಳ ಬಳಕೆ ಎಂದಿನಿಂದ ಪ್ರಾರಂಭವಾಯಿತು ಎಂದು ಹೇಳುವುದು ಕಷ್ಟ. ಏಕೆಂದರೆ ಕರ್ನಾಟಕದಲ್ಲಿ ನಾಣ್ಯಗಳ ಪ್ರಾಚೀನತೆಯನ್ನು ತೋರಿಸುವ ಮಾಹಿತಿಗಳು ಅಷ್ಟಾಗಿ ದೊರಕಿಲ್ಲ. ಮುದ್ರಾಂಕಿತ ನಾಣ್ಯಗಳೇ ನಮಗೆ ಇದುವರೆಗೂ ಕರ್ನಾಟಕದಲ್ಲಿ ದೊರಕಿರುವ ಅತ್ಯಂತ ಪ್ರಾಚೀನ ನಾಣ್ಯಗಳು. ಇವುಗಳು ಉತ್ತರ ಭಾರತದಲ್ಲಿ ವಿಶೇಷವಾಗಿ ಬಳಕೆಯಲ್ಲಿದ್ದು, ಕರ್ನಾಟಕಕ್ಕೂ ಕಾಲಕ್ರಮದಲ್ಲಿ ಪ್ರಸರಿಸಿದವು. ಈ ನಾಣ್ಯಗಳು ಬೆಳ್ಳಿಯ ಇಲ್ಲವೆ ತಾಮ್ರದ ಚೂರುಗಳು. ಇವಕ್ಕೆ ಖಚಿತವಾದ ಆಕಾರವಿಲ್ಲ. ಚೌಕ, ಆಯಾಕಾರ, ವೃತ್ತಾಕಾರ, ಐದು ಅಥವಾ ಎಂಟು ಮೂಲೆಗಳುಳ್ಳ ಆಕಾರ ಮುಂತಾದ ರೂಪಗಳಲ್ಲಿರುತ್ತವೆ. ಮತ್ತೆ ಕೆಲವು ಉದ್ದವಾಗಿರುತ್ತವೆ. ಇವುಗಳ ಮೇಲೆ ಅಕ್ಷರಗಳಾಗಲಿ ಇತರ ಬರವಣಿಗೆಯಾಗಲಿ ಕಾಣಬರುವುದಿಲ್ಲ. ಈ ನಾಣ್ಯಗಳ ಹಿಮ್ಮುಖ ಮತ್ತು ಮುಮ್ಮುಖಗಳಲ್ಲಿ ಬೆಟ್ಟ, ನದಿ, ಮರ, ಪ್ರಾಣಿಗಳು, ಸ್ವಸ್ತಿಕ, ಶ್ರೀವತ್ಸ ಮುಂತಾದ ಚಿಹ್ನೆಗಳು ಪಂಚ್ ಮಾಡಲ್ಪಟ್ಟಿರುತ್ತವೆ. ಈ ಚಿಹ್ನೆಗಳನ್ನು ಮುದ್ರಿಸುವಲ್ಲಿ ಒಂದು ರೀತಿಯ ವಿನ್ಯಾಸವು ಕಾಣಬರುತ್ತದೆ. ಈ ಚಿಹ್ನೆಗಳು ರಾಜ, ದೇಶ, ಲಾಂಛನ ಮುಂತಾದವನ್ನು ಪ್ರತಿಬಿಂಬಿಸುತ್ತವೆ ಎಂದು ಹೇಳಬಹುದು. ಕರ್ನಾಟಕದಲ್ಲಿ ಮುದ್ರಾಂಕಿತ ನಾಣ್ಯಗಳು ಬನವಾಸಿ, ವಡಗಾಂ, ಮಾಧವಪುರ, ಧಾರವಾಡ ಮುಂತಾದ ಕಡೆಗಳಲ್ಲಿ ದೊರಕಿವೆ. ಇವು ಉತ್ತರ ಭಾರತದಲ್ಲಿ ವಿಶೇಷವಾಗಿ ಬಳಕೆಯಲ್ಲಿದ್ದ ಮೌರ್ಯರ ಕಾಲದ ನಾಣ್ಯಗಳನ್ನೇ

ಹೋಲುತ್ತವೆ. ಇವುಗಳ ಮುಮ್ಮುಖದಲ್ಲಿ ಐದು ಚಿಹ್ನೆಗಳು ಕಾಣಬರು ತ್ತವೆ. ಕರ್ನಾಟಕದಲ್ಲಿ ಈ ನಾಣ್ಯಗಳು ಕ್ರಿಸ್ತಪೂರ್ವ ಎರಡನೆಯ ಶತಮಾನ ದಲ್ಲಿ ಬಳಕೆಯಲ್ಲಿದ್ದವೆಂದು ತಿಳಿದುಬಂದಿದೆ.

## ಸಾತವಾಹನ ನಾಣ್ಯಗಳು

ಅನಂತರ ಕರ್ನಾಟಕದಲ್ಲಿ ಆಳಿದ ಸಾತವಾಹನರ ಕಾಲದಲ್ಲಿ ನಾಣ್ಯಗಳ ಬಗೆಗೆ ವಿಶೇಷ ಮಾಹಿತಿ ದೊರಕುತ್ತದೆ. ಇವರ ನಾಣ್ಯಗಳು ವಿಶೇಷವಾಗಿ ಸೀಸದಿಂದ ಮಾಡಿದವು. ಬೆಳ್ಳಿಯ ನಾಣ್ಯಗಳು ಬಹು ಕಡಿಮೆ. ಈ ನಾಣ್ಯ ಗಳಲ್ಲಿ ವಿದೇಶೀಯ ಪ್ರಭಾವ ಕಡಿಮೆ. ನೋಡಲು ಅಂತಹ ಸುಂದರವಾಗಿ ಯಾಗಲೀ ಅಥವಾ ಕಲಾತ್ಮಕವಾಗಿಯಾಗಲೀ ಇರುವುದಿಲ್ಲ. ಬೆಳ್ಳಿಯ ನಾಣ್ಯ ಗಳಲ್ಲಿ ಒಂದು ಕಡೆ ರಾಜನ ಚಿತ್ರವೂ ಮತ್ತೊಂದು ಕಡೆ ಆನೆ, ಕುದುರೆ, ಸಿಂಹ, ಬಿಲ್ಲು, ಬಾಣ ಮುಂತಾದ ಚಿತ್ರಗಳೂ ಇರುತ್ತವೆ. ಗೌತಮೀಪುತ್ರ ಸಾತಕರ್ಣಿ ಎಂಬ ಸಾತವಾಹನ ರಾಜನು ನಹಪಾಣನೆಂಬ ರಾಜನನ್ನು ಸೋಲಿಸಿ ಅವನ ರಾಜ್ಯವನ್ನು ತನ್ನ ವಶಮಾಡಿಕೊಂಡನು. ಅನಂತರ ಆ ರಾಜ್ಯದಲ್ಲಿ ಚಲಾವಣೆಯಲ್ಲಿದ್ದ ನಹಪಾಣನ ನಾಣ್ಯಗಳನ್ನು ಹಿಂದಕ್ಕೆ ತೆಗೆದು ಕೊಂಡು ಅವುಗಳ ಮೇಲೆ ತನ್ನ ಹೆಸರಿನ ಬರಹವನ್ನು ಸೇರಿಸಿದನು. ತಾನು ನಹಪಾಣನ ಮೇಲೆ ಸಂಪಾದಿಸಿದ ವಿಜಯದ ಜ್ಞಾಪಕಾರ್ಥವಾಗಿ ಗೌತಮೀ ಪುತ್ರನು ಈ ರೀತಿ ಮಾಡಿದನು. ಯಜ್ಞಶ್ರೀ ಸಾತಕರ್ಣಿಯ ನಾಣ್ಯಗಳ ಮೇಲೆ ಹಡಗಿನ ಚಿತ್ರವಿರುವುದರಿಂದ, ಸಾತವಾಹನ ಕಾಲದಲ್ಲಿ ನೌಕಾ ಯಾನವು ಚೆನ್ನಾಗಿ ಮುಂದುವರಿದಿದ್ದಿತೆಂದು ಗೊತ್ತಾಗುತ್ತದೆ.

ಸಾತವಾಹನರ ಅಧೀನ ರಾಜರಾದ ಮಹಾರಥಿಗಳು ಮತ್ತು ಚುಟು ಕುಲದ ಅರಸರು ಚಿತ್ರದುರ್ಗ ಮತ್ತು ಉತ್ತರ ಕನ್ನಡ ಜಿಲ್ಲೆಯ ಪ್ರದೇಶ ಗಳಲ್ಲಿ ಆಳುತ್ತಿದ್ದರು. ಮಹಾರಥಿಗಳು ಸಾತವಾಹನರಂತೆಯೇ ಸೀಸದ ನಾಣ್ಯಗಳನ್ನು ಮುದ್ರಿಸಿದರು. ಇವರ ನಾಣ್ಯಗಳಲ್ಲಿ ಒಂದು ಕಡೆ ಎತ್ತಿನ ಚಿತ್ರವೂ, ಹಿಂಭಾಗದಲ್ಲಿ ಬೇಲಿಯೊಳಗಿರುವ ವೃಕ್ಷವೂ ಇವೆ, ಇವುಗಳ

ಮೇಲೆ ರಾಜರ ಹೆಸರೂ ಕಾಣಬರುತ್ತದೆ. ಚುಟುವಂಶದ ಚುಟುಕುಲಾನಂದ ಮತ್ತು ಮುಡಾನಂದ ಎಂಬ ರಾಜರ ಸೀಸದ ನಾಣ್ಯಗಳಲ್ಲಿ ಈ ರಾಜರ ಹೆಸರು, ಬೇಲಿಯೊಳಗಿನ ವೃಕ್ಷ ಮತ್ತು ಬೆಟ್ಟದ ಚಿತ್ರ ಕಾಣಬರುತ್ತವೆ. ಈ ರೀತಿಯ ನಾಣ್ಯಗಳು ಕಾರವಾರ, ಚಿತ್ರದುರ್ಗ, ಚಂದ್ರವಳ್ಳಿ ಮತ್ತು ಬನವಾಸಿಗಳಲ್ಲಿ ದೊರಕಿವೆ.

## ರೋಮನ್ ನಾಣ್ಯಗಳು

ಕ್ರಿಸ್ತಶಕೆಯ ಮೊದಲ ಶತಮಾನಗಳಲ್ಲಿ ಕರ್ನಾಟಕವು ರೋಮಿನೊಡನೆ ವಿಶೇಷವಾದ ವ್ಯಾಪಾರ ಸಂಪರ್ಕವನ್ನು ಹೊಂದಿದ್ದಿತು, ರೋಮ್ ದೇಶದ ಸ್ತ್ರೀಯರಿಗೆ ಪಚ್ಚೆಯು ಬಹಳ ಮೆಚ್ಚಿಗೆಯಾಗಿತ್ತು. ಅದು ಕರ್ನಾಟಕದ ಕೆಲವು ಭಾಗಗಳಲ್ಲಿ ದೊರಕುತ್ತಿದ್ದಿತು. ಆದುದರಿಂದ ರೋಮಿನ ವ್ಯಾಪಾರಿಗಳು ಕರ್ನಾಟಕಕ್ಕೆ ಬಂದು ತಮ್ಮ ನಾಣ್ಯಗಳನ್ನು ಕೊಟ್ಟು ಪಚ್ಚೆಯನ್ನು ತೆಗೆದುಕೊಂಡು ಹೋಗುತ್ತಿದ್ದರು. ಅದೇ ರೀತಿಯಲ್ಲಿ ಭಾರತದ ಸಂಬಾರ ಪದಾರ್ಥಗಳಿಗೂ ರೋಮಿನಲ್ಲಿ ವಿಶೇಷ ಬೇಡಿಕೆಯಿದ್ದಿತು. ಅದರಲ್ಲಿಯೂ ಕರಿಮೆಣಸು ಮಲೇರಿಯವನ್ನು ತಡೆಗಟ್ಟಬಹುದೆಂಬ ವಿಷಯ ತಿಳಿದ ಮೇಲೆ, ರೋಮಿನಲ್ಲಿ ಅದಕ್ಕೆ ವಿಶೇಷ ಬೆಲೆಯಿದ್ದಿತು. ಕರ್ನಾಟಕವು ರೋಮಿಗೆ ಮೆಣಸನ್ನೂ ರಫ್ತು ಮಾಡುತ್ತಿತ್ತು. ಈ ವ್ಯಾಪಾರ ಸಂಬಂಧಗಳ ಕುರುಹಾಗಿ ಆಗಿನ ಕಾಲದಲ್ಲಿ ಚಲಾವಣೆಯಲ್ಲಿದ್ದ ನೂರಾರು ರೋಮನ್ ನಾಣ್ಯಗಳು ಕರ್ನಾಟಕದಲ್ಲಿ ದೊರಕಿವೆ. ಬೆಂಗಳೂರು ಎಚ್. ಎ. ಎಲ್. ವಿಮಾನ ನಿಲ್ದಾಣ ಪ್ರದೇಶದಲ್ಲಿ ಅಗೆಯುತ್ತಿದ್ದಾಗ ೨೫೬ ಬೆಳ್ಳಿಯ ರೋಮನ್ ನಾಣ್ಯಗಳು ದೊರಕಿದವು. ಯಶವಂತಪುರದಲ್ಲಿ ೧೬೩ ಇದೇ ರೀತಿಯ ನಾಣ್ಯಗಳು ದೊರಕಿದವು. ಚಂದ್ರವಳ್ಳಿಯ ಭೂಶೋಧನೆಯಲ್ಲಿಯೂ ಇವು ದೊರಕಿವೆ. ರೋಮನ್ ನಾಣ್ಯಗಳಲ್ಲಿ ಒಂದು ಕಡೆ ರಾಜನ ಚಿತ್ರವೂ ಹಿಂಭಾಗದಲ್ಲಿ ಬರಹವೂ ಕಾಣಬರುತ್ತವೆ. ಅಗಸ್ಟಸ್, ಟೈಬೀರಿಯಸ್ ಮತ್ತು ಕ್ಯಾಲಿಗುಲ ಈ ರೋಮನ್ ರಾಜರ ನಾಣ್ಯಗಳು ಮಾತ್ರ ಕರ್ನಾಟಕದಲ್ಲಿ ದೊರಕಿವೆ.

## ಬನವಾಸಿ ಕದಂಬರ ನಾಣ್ಯಗಳು

ಈ ವಂಶದ ರಾಜರುಗಳಿಗೆ ಸೇರಬಹುದಾದ ಖಚಿತವಾದ ನಾಣ್ಯಗಳು ದೊರಕಿಲ್ಲ. ಆದರೆ ಬಟ್ಟಲಿನಾಕಾರದ ಚಿನ್ನದ ನಾಣ್ಯಗಳು ಇವರಿಗೆ ಸೇರಿದ್ದಿರಬಹುದೆಂದು ಕೆಲವರ ಮತ. ತೆಳ್ಳಗಿರುವ, ಸುಮಾರು ಅರ್ಧಂಗುಲ ವ್ಯಾಸದ ಚಿನ್ನದ ತಗಡಿನ ಚೂರಿಗೆ ಮಧ್ಯದಲ್ಲಿ ಪದ್ಮದ ಚಿಹ್ನೆಯನ್ನೂ ಸುತ್ತಲೂ ಬಿಲ್ಲು, ಶಂಖ ಮುಂತಾದ ಚಿಹ್ನೆಗಳನ್ನು ಒತ್ತುವುದರಿಂದ ಈ ನಾಣ್ಯವು ಬಟ್ಟಲಿನ ಆಕಾರವನ್ನು ಪಡೆಯುತ್ತದೆ. ಮಧ್ಯದಲ್ಲಿ ಪದ್ಮದ ಚಿಹ್ನೆಯಿರುವುದರಿಂದ ಈ ನಾಣ್ಯಗಳನ್ನು ಪದ್ಮಟಂಕವೆಂದೂ ಕರೆಯುತ್ತಾರೆ. ಕದಂಬರೇ ಪದ್ಮಟಂಕ ನಮೂನೆಯ ನಾಣ್ಯಗಳನ್ನು ಬೆಳಕಿಗೆ ತಂದವರೆಂದು ಅನೇಕರು ಅಭಿಪ್ರಾಯಪಡುತ್ತಾರೆ. ಕದಂಬರ ಪದ್ಮಟಂಕಗಳಲ್ಲಿ ಸಿಂಹದ ಚಿತ್ರವನ್ನೂ ಕಾಣಬಹುದು. ಆದರೆ ಈ ನಾಣ್ಯಗಳ ಮೇಲೆ ಬರವಣಿಗೆಯು ಇರುವುದಿಲ್ಲ. ಆದುದರಿಂದ ಇವು ಕದಂಬರಿಗೇ ಸೇರಿದ್ದು ಎಂದು ಖಚಿತವಾಗಿ ಹೇಳುವುದು ಕಷ್ಟ.

## ಗಂಗರ ನಾಣ್ಯಗಳು

ತಲಕಾಡಿನ ಗಂಗವಂಶೀತನದ ಅರಸರು ಚಿನ್ನ ಮತ್ತು ತಾಮ್ರದ ನಾಣ್ಯಗಳನ್ನು ಅಚ್ಚು ಹಾಕಿಸಿದರು. ಇವರ ಬೆಳ್ಳಿಯ ನಾಣ್ಯಗಳು ಇದುವರೆವಿಗೂ ದೊರಕಿಲ್ಲ. ಇವರ ಚಿನ್ನದ ನಾಣ್ಯಗಳು ಐವತ್ತರಿಂದ ಅರವತ್ತು ಗ್ರೇನ್ ತೂಗುತ್ತವೆ. ಇವರ ನಾಣ್ಯಗಳ ಮುಂಭಾಗದಲ್ಲಿ ಅಲಂಕೃತ ಆನೆಯೂ, ಹಿಂಭಾಗದಲ್ಲಿ ಹೂವಿನ ಚಿತ್ರ ಮತ್ತು ಬರಹಗಳು ಇರುತ್ತವೆ. ಇವರ ಸಣ್ಣ ಮೌಲ್ಯದ ಚಿನ್ನದ ನಾಣ್ಯಗಳು ಆರು ಗ್ರೇನ್ ಮತ್ತು ಒಂದೂವರೆ ಗ್ರೇನ್ ತೂಕವನ್ನು ಹೊಂದಿರುತ್ತವೆ.

## ಬಾದಾಮಿ ಚಾಲುಕ್ಯರ ನಾಣ್ಯಗಳು

ವರಾಹ ಲಾಂಛನವನ್ನು ಹೊಂದಿದ್ದ ಬಾದಾಮಿಯ ಚಾಲುಕ್ಯರು ತಮ್ಮ ನಾಣ್ಯಗಳ ಮೇಲೆ ವರಾಹದ ಚಿಹ್ನೆಯನ್ನು ಮುದ್ರಿಸಿದರು. ವರಹ ಎಂಬ ನಾಣ್ಯಗಳು ಇದರಿಂದಲೇ ವಿಕಾಸಗೊಂಡಿರಬೇಕೆಂದು ಹೇಳಬಹುದು. ಒಂದು ಕಡೆಯಲ್ಲಿ ವರಾಹದ ಚಿತ್ರ, ಮತ್ತೊಂದು ಕಡೆಯಲ್ಲಿ ಪದ್ಮವಿರುವ ನಾಣ್ಯಗಳನ್ನು ಒಂದನೆಯ ಪುಲಿಕೇಶಿಯು ಅಚ್ಚು ಹಾಕಿಸಿದನೆಂದು ತಿಳಿದು ಬಂದಿದೆ. ಮಹಾರಾಷ್ಟ್ರ ಮತ್ತು ಉತ್ತರ ಕರ್ನಾಟಕವಲ್ಲಿ ಇನ್ನೊಂದು ನಮೂನೆಯ ನಾಣ್ಯಗಳು ದೊರಕಿವೆ. ಇವುಗಳಲ್ಲಿ ಶಂಖ, ಚಕ್ರ, ಧನುಸ್ಸು ಮತ್ತು ಶ್ರೀ ಎಂಬ ಅಕ್ಷರಗಳು ಒಂದು ಭಾಗವಲ್ಲೂ, ಮತ್ತೊಂದು ಕಡೆ ವರಾಹ ಚಿಹ್ನೆಯೂ ಇವೆ. ಈ ನಾಣ್ಯಗಳು ಪ್ರಸಿದ್ಧನಾದ ಇಮ್ಮಡಿ ಪುಲಿಕೇಶಿಗೆ ಸೇರಿದವೆಂದು ವಿದ್ವಾಂಸರು ಅಭಿಪ್ರಾಯಪಡುತ್ತಾರೆ. ಆದರೆ ಈ ನಾಣ್ಯಗಳಲ್ಲಿ ಬರಹವಿಲ್ಲದೇ ಇರುವುದರಿಂದ ಖಚಿತವಾಗಿ ಏನನ್ನೂ ಹೇಳಲಾಗುವುದಿಲ್ಲ. ವರಾಹ ಚಿಹ್ನೆಯಿರುವುದರಿಂದ ಇವು ಬಾದಾಮಿ ಚಾಲುಕ್ಯರ ನಾಣ್ಯಗಳಂತೂ ಹೌದು. ಮೊದಲನೆಯ ವಿಕ್ರಮಾದಿತ್ಯನ ಚಿನ್ನದ ನಾಣ್ಯಗಳಲ್ಲಿ, ಮುಂಭಾಗದಲ್ಲಿ ವರಾಹದ ಚಿಹ್ನೆಯೂ ಹಿಂಭಾಗದಲ್ಲಿ ಶ್ರೀ ವಿಕ್ರಮ ಮಹಾರಾಜ ಎಂಬ ನಾಗರೀ ಲಿಪಿಯ ಬರವಣಿಗೆಯೂ ಇದೆ. ಈ ನಾಣ್ಯಗಳು ೧೧೭ ಗ್ರೇನ್ ತೂಗುತ್ತವೆ. ಇದೇ ರೀತಿಯ ಚಿನ್ನ-ಬೆಳ್ಳಿ ಮಿಶ್ರಣದ ನಾಣ್ಯಗಳೂ ದೊರಕಿವೆ.

## ರಾಷ್ಟ್ರಕೂಟರ ನಾಣ್ಯಗಳು

ಕರ್ನಾಟಕ ಇತಿಹಾಸದಲ್ಲಿ ಮಾತ್ರವಲ್ಲದೆ ಭಾರತದ ಇತಿಹಾಸದಲ್ಲೇ ರಾಷ್ಟ್ರಕೂಟರು ತಮ್ಮ ರಾಜಕೀಯ ಮತ್ತು ಸಾಂಸ್ಕೃತಿಕ ಸಾಧನೆಗಳಿಂದ ಪ್ರಸಿದ್ಧಿ ಪಡೆದಿದ್ದಾರೆ. ಇವರ ನೂರಾರು ಶಾಸನಗಳು ಬೆಳಕಿಗೆ ಬಂದಿದ್ದು, ಇವರ ಖ್ಯಾತಿಯನ್ನು ತಿಳಿಸುತ್ತವೆ. ಆದರೆ ಇವರ ನಾಣ್ಯಗಳು ಮಾತ್ರ

ದೊರಕಿಲ್ಲದೇ ಇರುವುದು ಬಲು ಆಶ್ಚರ್ಯದ ಸಂಗತಿ. ವ್ಯಾಪಾರ ವ್ಯವಹಾರಗಳಲ್ಲಿ ಮುಂದುವರೆದಿದ್ದ ರಾಷ್ಟ್ರಕೂಟರ ನಾಣ್ಯಗಳು ಯಾವರೀತಿ ಇದ್ದವು ಎಂಬುವುದು ತಿಳಿಯದಾಗಿದೆ. ಆದರೆ ಇವರ ಶಾಸನಗಳಲ್ಲಿ ಇವರು ಅಚ್ಚು ಹಾಕಿಸಿದ ಮತ್ತು ಬಳಸುತ್ತಿದ್ದ ನಾಣ್ಯಗಳ ಹೆಸರುಗಳು ಕಾಣಸಿಗುತ್ತವೆ. ದ್ರಮ್ಮ, ಸುವರ್ಣ, ಗದ್ಯಾಣ, ಕಳಂಜು, ಕಾಸು, ಮಂಜಾಡಿ, ಅಕ್ಕಂ ಮುಂತಾದ ನಾಣ್ಯಗಳ ಹೆಸರುಗಳು ಶಾಸನಗಳಲ್ಲಿ ಪದೇ ಪದೇಸಿಗುತ್ತವೆ. ಚಿನ್ನ ದ್ರಮ್ಮಗಳು ಸುಮಾರು ೬೫ ಗ್ರೇನ್ ತೊಗುತ್ತಿದ್ದವು. ಗದ್ಯಾಣವೆಂಬ ನಾಣ್ಯದಲ್ಲಿಯೂ ಚಿನ್ನ ಮತ್ತು ಬೆಳ್ಳಿಯ ಎರಡು ಸವೂನೆಗಳಿದ್ದವು. ಇದರ ತೂಕ ಸುಮಾರು ೯೬ ಗ್ರೇನ್. ಒಂದು ಗದ್ಯಾಣಕ್ಕೆ ಎರಡು ಕಳಂಜುಗಳು ಸಮಾನವಾಗಿದ್ದವು. ಕಾಸು ಎಂಬುದೂ ಚಿನ್ನದ ನಾಣ್ಯವಾಗಿದ್ದಿತು. ಇದರ ಕೂಕ ೧೫ ಗ್ರೇನ್. ಕಳಂಜು ನಾಣ್ಯದ ಇಪ್ಪತ್ತನೆಯ ಒಂದು ಭಾಗದ ಮೌಲ್ಯದ ನಾಣ್ಯವೇ ಮಂಜಾಡಿ. ಅಂದರೆ ಇದರ ತೂಕ ಎರಡೂವರೆ ಗ್ರೇನ್ ಮಾತ್ರ. ಕಾಸಿನ ಹನ್ನೆರಡನೆಯ ಒಂದು ಭಾಗದ ನಾಣ್ಯಕ್ಕೆ ಅಕ್ಕಂ ಎಂದು ಹೆಸರಿದ್ದಿತು. ಇದು ಕೇವಲ ಒಂದೂವರೆ ಗ್ರೇನ್ ತೂಕದ ನಾಣ್ಯ. ಇವಿಷ್ಟೂ ಶಾಸನಗಳಿಂದ ರಾಷ್ಟ್ರಕೂಟರ ನಾಣ್ಯಗಳ ವಿಷಯದಲ್ಲಿ ತಿಳಿಯುವ. ಮಾಹಿತಿ. 'ಶ್ರೀ ಕೃಷ್ಣರಾಜಸ್ಯ' ಎಂಬ ಬರಹವನ್ನುಳ್ಳ ಬೆಳ್ಳಿಯ ನಾಣ್ಯಗಳು ರಾಷ್ಟ್ರಕೂಟ ಮೊದಲನೆಯ ಕೃಷ್ಣನಿಗೆ ಸೇರಿದ್ದೆಂದು ಕೆಲವರ ಅಭಿಪ್ರಾಯ ಕಾಕರಾಯ ಎಂಬ ಬರಹವನ್ನು ಹೊಂದಿರುವ ತಾಮ್ರದ ನಾಣ್ಯಗಳು ರಾಷ್ಟ್ರಕೂಟರ ರಾಜಧಾನಿಯಾದ ಮಾನ್ಯಖೇಟದಲ್ಲಿ ದೊರಕಿವೆ. ಇವುಗಳು ರಾಷ್ಟ್ರಕೂಟ ಇಮ್ಮಡಿ ಕರ್ಕರಾಜನು ಅಚ್ಚು ಹಾಕಿಸಿದನೆಂದು ಕೆಲವರ ಅಭಿಪ್ರಾಯ. ಆದರೆ ಇವುಗಳಲ್ಲಿ ಖಚಿತತೆಯಿಲ್ಲ.

## ಕಲ್ಯಾಣದ ಚಾಲುಕ್ಯರ ನಾಣ್ಯಗಳು

ಕರ್ನಾಟಕದಲ್ಲಿ ಆಳಿದ ಪ್ರಮುಖ ರಾಜಮನೆತನಗಳಲ್ಲಿ ಕಲ್ಯಾಣವನ್ನು ತಮ್ಮ ರಾಜಧಾನಿಯನ್ನಾಗಿ ಮಾಡಿಕೊಂಡ ಚಾಲುಕ್ಯರು ಪ್ರಮುಖರು.

ಇವರು ಬಾದಾಮಿಯಲ್ಲಿ ಆಳಿದ ಚಾಲುಕ್ಯರ ವಂಶದವರೇ ಆದರೂ ಸ್ವತಂತ್ರ ಪ್ರಸಿದ್ಧಿಗೆ ಬಂದವರು. ಇವರಲ್ಲಿ ಜಯಸಿಂಹ ಜಗದೇಕಮಲ್ಲ; ಮೊದಲ ೧ನೆಯ ಸೋಮೇಶ್ವರ (ತ್ರೈಲೋಕ್ಯಮಲ್ಲನೆಂಬ ಬಿರುದು), ಎರಡನೆಯ ಸೋಮೇಶ್ವರ (ಭುವನೈಕಮಲ್ಲನೆಂಬ ಬಿರುದು), ಆರನೆಯ ವಿಕ್ರಮಾದಿತ್ಯ ಮುಂತಾದ ಖ್ಯಾತ ರಾಜರು ಆಳಿದರು. ಇವರ ನೂರಾರು ಶಾಸನಗಳಿಂದ ಈ ಕಾಲದಲ್ಲಿ ಕರ್ನಾಟಕವು ಸಂಪದ್ಭರಿತವಾಗಿದ್ದಿತೆಂದು ಗೊತ್ತಾಗುತ್ತದೆ. ಇದಕ್ಕೆ ಪೂರಕವಾಗಿ ಇವರ ಚಿನ್ನದ ನಾಣ್ಯಗಳೂ ದೊರೆತಿವೆ. ಇವರ ಶಾಸನಗಳಲ್ಲಿಯೂ ಅನೇಕ ನಾಣ್ಯಗಳ ಹೆಸರು ಕಾಣಸಿಗುತ್ತವೆ. ನಾಣ್ಯಗಳನ್ನು ಮುದ್ರಿಸುವ ಟಂಕಶಾಲೆಗಳು ಇದ್ದ ಸ್ಥಳಗಳ ಹೆಸರು ದೊರಕುವುದು ಮತ್ತೊಂದು ವಿಶೇಷ. ನಾಣ್ಯಗಳಿಗೆ ಟಂಕಶಾಲೆಯ ಸ್ಥಳದ ಹೆಸರನ್ನು ಸೇರಿಸಿ ಕರೆಯುವುದು ಈ ಕಾಲದಿಂದ ಪ್ರಾರಂಭವಾದ ಪದ್ಧತಿ ಇರಬಹುದು. ಲೊಕ್ಕಿಗದ್ಯಾಣ, ಲೊಕ್ಕಿ ಅಚ್ಚಿನ ಗದ್ಯಾಣ ಮುಂತಾದ ಪದಗಳು ಚಾಲುಕ್ಯರ ಶಾಸನಗಳಲ್ಲಿ ಕಾಣಬರುತ್ತವೆ. ಲೊಕ್ಕಿಗುಂಡಿ ಅಥವಾ ಲಕ್ಕುಂಡಿಯಲ್ಲಿ (ಧಾರವಾಡ ಜಿಲ್ಲೆ)ದ್ದ ಟಂಕಶಾಲೆಯಲ್ಲಿ ಅಚ್ಚಾದ ಗದ್ಯಾಣಗಳನ್ನು ಬೇರೆ ಕಡೆ ಅಚ್ಚಾದ ನಾಣ್ಯಗಳಿಂದ ಭಿನ್ನವಾಗಿ ತೋರಿಸಲು ಈ ರೀತಿ ಹೇಳಿರಬೇಕೆಂದು ವಿದ್ವಾಂಸರ ಮತ.

ಈ ಕಾಲದ ಶಾಸನಗಳಲ್ಲಿ ನಾಣ್ಯಗಳನ್ನು ಸೂಚಿಸುವ ಅನೇಕ ಉಲ್ಲೇಖನಗಳು ದೊರೆಯುತ್ತವೆ. ಗದ್ಯಾಣ, ಪೊನ್ ಅಥವಾ ಹೊನ್, ನಿಷ್ಕ, ದ್ರಮ್ಮ, ಪಣ, ಹಾಗ, ವೀಸ, ಕಾಕನಿ, ಬೇಳೆ ಮುಂತಾದವುಗಳು ವಿಶೇಷವಾಗಿ ಹೆಸರಿಸಲ್ಪಟ್ಟಿವೆ. ಶಾಸನಗಳಲ್ಲಿ ದೊರಕುವ ಮಾಹಿತಿಗಳ ಆಧಾರದ ಮೇಲೆ ಈ ಕೆಳಗೆ ಕಂಡ ಕೋಷ್ಟಕವನ್ನು ರಚಿಸಬಹುದು.

| | | |
|---|---|---|
| ೧ ಗದ್ಯಾಣ | — | ೧೦ ಪಣ |
| ೧ ಪಣ | — | ೪ ಹಾಗ |
| ೧ ಹಾಗ | — | ೪ ವೀಸ |
| ೧ ವೀಸ | — | ೨ ಬೇಳೆ |

ಇವಿಷ್ಟೂ ಆ ಕಾಲದ ಶಾಸನಗಳಿಂದ ದೊರಕುವ ವಿಷಯಗಳು. ಇನ್ನು ದೊರಕಿರುವ ಕಲ್ಯಾಣದ ಚಾಲುಕ್ಯರ ನಾಣ್ಯಗಳನ್ನು ಗಮನಿಸೋಣ.

ಕಲ್ಯಾಣದ ಚಾಲುಕ್ಯರ ನಾಣ್ಯಗಳು ಪಂಚ್ ಮಾರ್ಕ್ ನಮೂನೆಗೆ ಸೇರಿದವು. ಇವುಗಳ ಮೇಲೆ ಅನೇಕ ಚಿಹ್ನೆಗಳು ಪಂಚ್ ಮಾಡಲ್ಪಟ್ಟಿವೆ. ಜಯ

ಸಿಂಹ ಜಗದೇಕಮಲ್ಲನ ಎರಡು ನಮೂನೆಯ ನಾಣ್ಯಗಳು ಬೆಳಕಿಗೆ ಬಂದಿವೆ. ಮೊದಲನೆಯ ನಮೂನೆಯ ನಾಣ್ಯದಲ್ಲಿ ಐದು ಸಿಂಹಗಳನ್ನು ಪಂಚ್‌ಮಾಡಿ, ಅವುಗಳ ಮೇಲೆ ಎರಡು ಶ್ರೀ ಎಂಬ ಅಕ್ಷರ, ಕತ್ತಿ, ಯಜ ಎಂಬ ಬರಹಗಳು ಪಂಚ್ ಮಾಡಲ್ಪಟ್ಟಿವೆ. ಈ ನಾಣ್ಯದ ಹಿಂಭಾಗದಲ್ಲಿ ಯಾವ ಚಿಹ್ನೆಯಾಗಲೀ, ಅಕ್ಷರವಾಗಲೀ ಇಲ್ಲ. ಎರಡನೆಯ ನಮೂನೆಯ ನಾಣ್ಯದಲ್ಲಿ ಒಂಬತ್ತು ಪಂಚ್ ಚಿಹ್ನೆಗಳಿವೆ. ಮಧ್ಯದಲ್ಲಿ ದೇವಾಲಯದ ಗೋಪುರದ ಚಿತ್ರವಿದೆ. ಪಕ್ಕದಲ್ಲಿ ಚಕ್ರ ಮತ್ತು ಶ್ರೀ ಎಂಬ ಅಕ್ಷರಗಳಿವೆ. ಅದರ ಸುತ್ತಲೂ ಜಗದೇಕಮಲ್ಲ ಎಂಬ ಕನ್ನಡ ಲಿಪಿಯ ಬರಹವಿದೆ. ಈ ನಾಣ್ಯದ ಹಿಂಭಾಗದಲ್ಲಿ ಅಕ್ಷರವಾಗಲೀ ಚಿಹ್ನೆಯಾಗಲೀ ಇಲ್ಲ.

ಮೊದಲನೆಯ ಸೋಮೇಶ್ವರ ತ್ರೈಲೋಕ್ಯಮಲ್ಲನ ನಾಣ್ಯಗಳ ಮುಂಭಾಗದಲ್ಲಿ ಐದು ಸಿಂಹಗಳಿವೆ. ತ್ರೈಲೋಕ್ಯಮಲ್ಲ ಎಂಬ ಕನ್ನಡ ಲಿಪಿಯ ಬರಹವೂ ಇವೆ. ಇನ್ನೊಂದು ನಾಣ್ಯದಲ್ಲಿ ಸಿಂಹದ ಬದಲು ಕಿರೀಟ ಮತ್ತು ಶ್ರೀ ಎಂಬ ಕನ್ನಡ ಅಕ್ಷರಗಳಿವೆ. ಎರಡನೆಯ ಸೋಮೇಶ್ವರ ಭುವನೈಕಮಲ್ಲನ ನಾಣ್ಯಗಳಲ್ಲಿ ಒಂಬತ್ತು ಪಂಚ್ ಚಿಹ್ನೆಗಳಿವೆ. ಇವುಗಳಲ್ಲಿ ನಾಲ್ಕು ತಾವರೆ ಹೂವುಗಳು, ಎರಡು ಶ್ರೀ ಅಕ್ಷರಗಳು, ಸೂರ್ಯ ಮತ್ತು ಚಂದ್ರ ಮತ್ತು ಭುವನೈಕಮಲ್ಲ ಎಂಬ ಕನ್ನಡ ಬರವಣಿಗೆ ಕಾಣಬರುತ್ತವೆ. ಇನ್ನೊಂದು ನಾಣ್ಯದಲ್ಲಿ ಮಧ್ಯದ ಪಂಚ್ ಚಿಹ್ನೆಯಲ್ಲಿ ಆನೆಯ ಚಿತ್ರವು ಎದ್ದು ಕಾಣುತ್ತದೆ. ಮಿಕ್ಕ ವಿಷಯಗಳಲ್ಲಿ ಅದು ಮೇಲೆ ಹೇಳಿದ ನಾಣ್ಯದಂತೆಯೇ ಇದೆ.

ಕಲ್ಯಾಣದ ಚಾಲುಕ್ಯ ವಂಶದಲ್ಲಿ ಅತಿ ಪ್ರಸಿದ್ಧನಾದ ಆರನೆಯ ವಿಕ್ರಮಾದಿತ್ಯನ ಚಿನ್ನದ ನಾಣ್ಯಗಳಲ್ಲಿಯೂ ಒಂಬತ್ತು ಪಂಚ್ ಚಿಹ್ನೆಗಳಿವೆ. ಇವುಗಳಲ್ಲಿ ಒಂದರಿಂದ ಐದರವರೆಗೆ ಐದು ಸಿಂಹಗಳ ಚಿಹ್ನೆಗಳೂ, ಎರಡೂ ಶ್ರೀ ಅಕ್ಷರಗಳೂ, ಸೂರ್ಯ ಮತ್ತು ಚಂದ್ರರೂ, ಕೊನೆಯ ಪಂಚಿನಲ್ಲಿ ಭುಜಬಲ ಎಂಬ ಕನ್ನಡ ಲಿಪಿಯ ಬರಹವೂ ಇವೆ. ಇದೇ ರೀತಿಯ ನಾಣ್ಯಗಳಲ್ಲಿ ಕೆಲವು ಮೂರನೆಯ ಸೋಮೇಶ್ವರ, ಮೂರನೆಯ ತೈಲಪ ದೊರೆಗಳಿಂದ ಅಚ್ಚು ಹಾಕಿಸಿದವುಗಳಿರಬಹುದೆಂದು ಊಹಿಸಬಹುದು.

ಕಲ್ಯಾಣದ ಚಾಲುಕ್ಯರ ಸಮಕಾಲೀನರೇ ಆಗಿದ್ದ ಕಳಚೂರಿ ವಂಶದ ದೊರೆಗಳ ನಾಣ್ಯಗಳು ವಿಶೇಷವಾಗಿ ದೊರಕಿಲ್ಲ. ದೊರಕಿರುವ ಈ ಮನೆತನದ ನಾಣ್ಯಗಳು ಚಿನ್ನದಿಂದ ತಯಾರಾದವು. ಅವುಗಳ ತೂಕ ೫೫ ಗ್ರೇನ್.

ಕೆಲವು ಚಿನ್ನದ ನಾಣ್ಯಗಳ ಮೇಲೆ ಮುರಾರಿ ಎಂಬ ಕನ್ನಡ ಬರಹವಿದೆ. ಇವುಗಳು ಕಳಚೂರಿವಂಶದ ದೊರೆ ರಾಯಮುರಾರಿ ಸೋವಿದೇವನಿಗೆ ಸಂಬಂಧಿಸಿದವುಗಳೆಂದು ಗೊತ್ತಾಗಿದೆ.

## ಹೊಯ್ಸಳರ ನಾಣ್ಯಗಳು

ಕರ್ನಾಟಕದಲ್ಲಿ ವಿಶೇಷ ಪ್ರಾಮುಖ್ಯವನ್ನು ಪಡೆದು ಜಗತ್ಪ್ರಸಿದ್ಧವಾದ ದೇವಾಲಯಗಳನ್ನು ನಿರ್ಮಿಸಿದ ಹೊಯ್ಸಳರ ನಾಣ್ಯಗಳ ವಿಷಯದಲ್ಲಿಯೂ ನಮಗೆ ತಿಳಿದಿರುವ ಮಾಹಿತಿ ಬಲು ಕಡಿಮೆ. ದೊರಕಿರುವ ನಾಣ್ಯಗಳೆಲ್ಲವೂ ಚಿನ್ನದಿಂದ ಮಾಡಿದವುಗಳು. ಇವುಗಳು ಮೂರು ಮೌಲ್ಯಗಳಲ್ಲಿವೆ. ಮೊದಲನೆಯದು ೬೩ ಗ್ರೇನ್ ತೂಗುತ್ತದೆ. ಎರಡನೆಯದು ಇದರ ಹತ್ತನೆಯ ಒಂದು ಭಾಗಕ್ಕೆ ಸರಿಹೋಗುವಂತೆ ೬.೩ ಗ್ರೇನ್ ತೂಗುತ್ತದೆ. ಮೂರನೆಯದು ಇದರ ನಾಲ್ಕನೆಯ ಒಂದು ಭಾಗಕ್ಕೆ ಸರಿಹೊಂದುವಂತೆ ಸುಮಾರು ೧.೫ ಗ್ರೇನ್ ತೂಗುತ್ತದೆ.

ವಿಷ್ಣುವರ್ಧನನ ನಾಣ್ಯಗಳ ಮುಂಭಾಗದಲ್ಲಿ ಎರಡು ಸಿಂಹಗಳು ಕಾಣುತ್ತವೆ. ಜೊತೆಗೆ ಸೂರ್ಯ ಮತ್ತು ಚಂದ್ರರುಗಳ ಚಿತ್ರಗಳೂ ಇವೆ. ಹಿಂಭಾಗದಲ್ಲಿ ಶ್ರೀ ತಲಕಾಡುಗೊಂಡ ಎಂಬ ಮೂರು ಸಾಲಿನ ಕನ್ನಡ ಬರವಣಿಗೆಯು ಕಾಣುತ್ತದೆ. ವಿಷ್ಣುವರ್ಧನನು ತಲಕಾಡನ್ನು ತನ್ನ ವಶಮಾಡಿಕೊಂಡದ್ದು ಇತಿಹಾಸದಲ್ಲಿ ಪ್ರಸಿದ್ಧವಾಗಿದೆ. ಈ ವಿಜಯದ ಜ್ಞಾಪಕಾರ್ಥವಾಗಿ ವಿಷ್ಣುವರ್ಧನನು ಈ ರೀತಿಯ ಚಿನ್ನದ ನಾಣ್ಯಗಳನ್ನು ಅಚ್ಚು ಹಾಕಿಸಿದನು. ಇವುಗಳ ಮುಂಭಾಗದಲ್ಲಿ ಸಿಂಹದ ಮೇಲೆ ಕುಳಿತಿರುವ ದುರ್ಗಿಯ ಚಿತ್ರವಿದೆ. ದುರ್ಗಿಯು ಕಿರೀಟವನ್ನು ಧರಿಸಿ ಶಂಖ ಮತ್ತು ಚಕ್ರಗಳನ್ನು ಎರಡು ಕೈಗಳಲ್ಲಿ ಹಿಡಿದಿರುವುದು ಚೆನ್ನಾಗಿ ಕಾಣುತ್ತದೆ. ಇನ್ನು ಎರಡು ಕೈಗಳಲ್ಲಿರುವ ಆಯುಧಗಳು ಸ್ಪಷ್ಟವಾಗಿ ಕಾಣುವುದಿಲ್ಲ. ದುರ್ಗಿಯ ಎರಡು ಭಾಗಗಳಲ್ಲಿ ಸೂರ್ಯ ಮತ್ತು ಚಂದ್ರ ಇವರ ಚಿತ್ರಗಳಿವೆ. ಹಿಂಭಾಗದಲ್ಲಿ ಶ್ರೀನೊಳಂಬವಾಡಿಗೊಂಡ ಎಂಬ ಕನ್ನಡ ಬರಹವಿದೆ. ವಿಷ್ಣುವರ್ಧನನು

ನೊಳಂಬರನ್ನು ಸೋಲಿಸಿ ಅವರ ರಾಜ್ಯ ನೊಳಂಬವಾಡಿಯನ್ನು ತನ್ನ ವಶ ಪಡಿಸಿಕೊಂಡು ನೊಳಂಬವಾಡಿಗೊಂಡ ಎಂಬ ಬಿರುದನ್ನು ಧರಿಸಿದನು. ಈ ಶೌರ್ಯದ ಜ್ಞಾಪಕಾರ್ಥವಾಗಿ ವಿಷ್ಣುವರ್ಧನನು ಈ ನಾಣ್ಯಗಳನ್ನು ಅಚ್ಚು ಹಾಕಿಸಿದನು.

ಹೊಯ್ಸಳ ದೊರೆ ಮೊದಲನೆಯ ನರಸಿಂಹನೂ ಚಿನ್ನದ ನಾಣ್ಯಗಳನ್ನು ಅಚ್ಚುಹಾಕಿಸಿದನು. ಇವನ ನಾಣ್ಯದ ಮುಂಭಾಗದಲ್ಲಿ ಸಿಂಹದ ಮೇಲೆ ಕುಳಿತಿರುವ ದುರ್ಗಾದೇವಿಯ ಚಿತ್ರವಿದೆ. ಹಿಂಭಾಗದಲ್ಲಿ ಶ್ರೀ ಪ್ರತಾಪ ನಾರಸಿಂಹ ಎಂಬ ಕನ್ನಡ ಲಿಪಿಯ ಬರವಣಿಗೆಯೂ ಇದೆ. ಈ ಮೇಲಿನ ನಾಣ್ಯಗಳು ಸುಮಾರು ೬೩ ಗ್ರೇನ್ ತೂಗುತ್ತವೆ. ಬಹುಶಃ ಇವು ಅತಿ ಹೆಚ್ಚಿನ ಮೌಲ್ಯದ ಗದ್ಯಾಣಗಳೆಂಬ ನಾಣ್ಯಗಳಿರಬೇಕೆಂದು ಹೇಳಬಹುದು. ಗದ್ಯಾಣಗಳ ಹತ್ತನೆಯ ಒಂದು ಭಾಗ ತೂಕದ ಕೆಲವು ನಾಣ್ಯಗಳೂ ದೊರಕಿವೆ. ಇವುಗಳು ಯಾವ ಹೊಯ್ಸಳ ರಾಜನಿಗೆ ಸೇರಿದವು ಎಂದು ಹೇಳುವುದು ಕಷ್ಟ. ಈ ಎಲ್ಲ ನಾಣ್ಯಗಳಲ್ಲಿಯೂ ಮುಂಭಾಗದಲ್ಲಿ ಸಿಂಹದ ಚಿತ್ರವಿದೆ. ಹಿಂಭಾಗದಲ್ಲಿ ಮಾತ್ರ ಈ ನಾಣ್ಯಗಳಲ್ಲಿ ಭಿನ್ನತೆ ಕಾಣಬರುತ್ತದೆ. ಒಂದು ನಾಣ್ಯದ ಹಿಂಭಾಗದಲ್ಲಿ ನೃತ್ಯ ಮಾಡುತ್ತಿರುವ ದುರ್ಗಾದೇವಿಯ ಚಿತ್ರವಿದೆ. ದುರ್ಗಿಯು ಕಿರೀಟವೇ ಮೊದಲಾದ ಆಭರಣಗಳಿಂದ ಅಲಂಕೃತಳಾಗಿದ್ದಾಳೆ. ಶಂಖ, ಚಕ್ರಗಳನ್ನು ಎರಡು ಕೈಗಳಲ್ಲಿ ಹಿಡಿದಿದ್ದಾಳೆ. ಮತ್ತೊಂದು ನಾಣ್ಯದ ಹಿಂಭಾಗದಲ್ಲಿ ಪದ್ಮಾಸನ ರೀತಿಯಲ್ಲಿ ಕುಳಿತಿರುವ ನರಸಿಂಹದೇವರ ಚಿತ್ರವಿದೆ. ಎಡಗೈಯಲ್ಲಿ ಶಂಖವೂ, ಬಲಗೈಯಲ್ಲಿ ಚಕ್ರವೂ ಇರುವ ಈ ದೇವತೆಯ ಚಿತ್ರವು ಬಹು ಕಲಾತ್ಮಕವಾಗಿದೆ. ಇನ್ನೊಂದು ನಮೂನೆಯ ನಾಣ್ಯದಲ್ಲಿ ಬಿಲ್ಲು ಬಾಣಗಳನ್ನು ಹಿಡಿದಿರುವ ಮನುಷ್ಯನ ಚಿತ್ರವಿದೆ. ಇನ್ನೊಂದು ನಾಣ್ಯದಲ್ಲಿ ಹಂದಿಯ ಚಿತ್ರವಿದೆ. ಈ ಎಲ್ಲ ನಾಣ್ಯಗಳ ಮುಂಭಾಗದಲ್ಲಿ, ವಿಷ್ಣುವರ್ಧನ ಮತ್ತು ನಾರಸಿಂಹನ ನಾಣ್ಯಗಳಲ್ಲಿರುವಂತೆ ಸಿಂಹವಿರುವುದರಿಂದ, ಇವುಗಳು ಖಚಿತವಾಗಿ ಹೊಯ್ಸಳರ ನಾಣ್ಯಗಳೆಂದು ಗೊತ್ತಾಗುತ್ತದೆ.

ಕೇವಲ ೧.೧ ಗ್ರೇನ್ ತೂಗುವ ಚಿನ್ನದ ನಾಣ್ಯವೊಂದು ಹಳೆಬೀಡಿನಲ್ಲಿ ದೊರಕಿದೆ. ಇದರ ಮುಂಭಾಗದಲ್ಲಿ ಸಿಂಹದ ಚಿತ್ರವಿದೆ. ಹಿಂಭಾಗದಲ್ಲಿ ನೃತ್ಯ ಮಾಡುತ್ತಿರುವ ದುರ್ಗಾದೇವಿಯ ಚಿತ್ರವಿದೆ. ಇದೇ ಹೊಯ್ಸಳರ ಕಾಲದ ಕನಿಷ್ಠ ಮೌಲ್ಯದ ಚಿನ್ನದ ನಾಣ್ಯ. ವೀರಬಲ್ಲಾಳ ಮುಂತಾದ ದೊರೆಗಳ ನಾಣ್ಯಗಳು ಇನ್ನೂ ದೊರಕದೇ ಇರುವುದು ಆಶ್ಚರ್ಯದ ಸಂಗತಿ.

## ಸೇವುಣರ ನಾಣ್ಯಗಳು

ಹೊಯ್ಸಳರ ಸಮಕಾಲೀನರೇ ಆದ ಸೇವುಣರು ಅಥವಾ ದೇವಗಿರಿಯ ಯಾದವರು ಕರ್ನಾಟಕದ ಉತ್ತರ ಭಾಗದಲ್ಲಿ ರಾಜ್ಯವನ್ನಾಳುತ್ತಿದ್ದರು. ಇವರಲ್ಲಿ ಐದನೆಯ ಭಿಲ್ಲಮ, ಎರಡನೆಯ ಸಿಂಘಣ, ಕೃಷ್ಣ, ಮಹಾದೇವ ಮತ್ತು ರಾಮಚಂದ್ರ ಮುಖ್ಯರಾದವರು. ಸೇವುಣರ ಚಿನ್ನದ ನಾಣ್ಯಗಳು ಪದ್ಮಟಂಕ ನಮೂನೆಗೆ ಸೇರಿದವು. ಇವರ ಇತರ ನಾಣ್ಯಗಳು ದೊರಕಿಲ್ಲ. ಸುಮಾರು ೫೭ ಗ್ರೇನ್ ತೂಕದ ಅರ್ಧಾಂಗುಲ ವ್ಯಾಸದ ಇವರ ನಾಣ್ಯಗಳು ಮಹಾರಾಷ್ಟ್ರ, ಮಧ್ಯಪ್ರದೇಶ, ಆಂಧ್ರಪ್ರದೇಶಗಳಲ್ಲಿ ವಿಶೇಷವಾಗಿ ದೊರಕಿವೆ. ಈ ಚಿನ್ನದ ನಾಣ್ಯಗಳು ಒಂದು ಕಡೆ ಮಾತ್ರ ಪಂಚ್ ಮಾಡಲ್ಪಟ್ಟು ಹಿಂಭಾಗವು ಖಾಲಿಯಾಗಿಯೇ ಉಳಿದಿವೆ. ಈ ನಾಣ್ಯಗಳ ಮಧ್ಯದಲ್ಲಿ ಪದ್ಮವೂ, ಮಿಕ್ಕ ಎರಡು ಕಡೆಗಳಲ್ಲಿ ಶ್ರೀ ಎಂಬ ಅಕ್ಷರವೂ, ಶಂಖ, ದೀಪ ಅಥವಾ ಖಡ್ಗದ ಚಿತ್ರಗಳೂ ಇರುತ್ತವೆ. ಇವುಗಳ ಜೊತೆಗೆ ರಾಜನ ಹೆಸರು ದೇವನಾಗರೀ ಲಿಪಿಯಲ್ಲಿರುತ್ತದೆ. ಇದರಿಂದ ನಾಣ್ಯಗಳನ್ನು ಅಚ್ಚು ಹಾಕಿಸಿದ ಸೇವುಣ ರಾಜನು ಯಾರು ಎಂಬುದು ಖಚಿತವಾಗುತ್ತದೆ. ಇದುವರೆಗೂ ಐದನೆಯ ಭಿಲ್ಲಮ, ಎರಡನೆಯ ಸಿಂಘಣ, ಕೃಷ್ಣ, ಮಹಾದೇವ ಮತ್ತು ರಾಮಚಂದ್ರ ಈ ಐದು ಯಾದವ ರಾಜರ ನಾಣ್ಯಗಳು ಮಾತ್ರ ದೊರಕಿವೆ. ಮಿಕ್ಕ ದೊರೆಗಳ ನಾಣ್ಯಗಳು ಇನ್ನೂ ದೊರಕಿಲ್ಲ. ದೊರಕಿರುವ ನಾಣ್ಯಗಳಲ್ಲಿ ಸಿಂಘಣನ ಹೆಸರು, ಸೇಘಣ ಎಂದೂ, ಕೃಷ್ಣನ ಹೆಸರು ಕನ್ಹರ ಅಥವಾ ಕನ್ಹಪ ಎಂದೂ ರಾಮಚಂದ್ರನ ಹೆಸರು ಶ್ರೀರಾಮ ಎಂದೂ ಕಾಣಬರುತ್ತದೆ. ಮಧ್ಯದಲ್ಲಿರುವ ಪದ್ಮವು ಚೆನ್ನಾಗಿ ಪಂಚ್ ಆಗಿರುವುದರಿಂದಲೂ, ಮತ್ತು ಚಿನ್ನದ ತಗಡು ತೆಳ್ಳಗಿರುವುದರಿಂದ ಇವರ ನಾಣ್ಯಗಳು ಸಣ್ಣ ಬಟ್ಟಲಿನಾಕಾರದಲ್ಲಿ ಕಾಣುತ್ತವೆ. ಇನ್ನೂ ಹೆಚ್ಚಿನ ಶೋಧನೆ ನಡೆದರೆ ಈ ರಾಜರ ಬೆಳ್ಳಿಯ ಮತ್ತು ತಾಮ್ರದ ನಾಣ್ಯಗಳೂ ದೊರಕುವುದು ಖಚಿತ.



ಪಂಚ್ ಮಾರ್ಕ್ ನಾಣ್ಯಗಳು (ಬೆಳ್ಳಿ)



ಬಾದಾಮಿ ಚಾಳುಕ್ಯರ ವರಾಹ (ಚಿನ್ನ)

ಕಲ್ಯಾಣ ಚಾಲುಕ್ಯ ಜಗದೇಕಮಲ್ಲನ ನಾಣ್ಯ (ಚಿನ್ನ)







ಗೋವಾ ಕದಂಬರ ಶಿವಚಿತ್ತನ ನಾಣ್ಯ (ಚಿನ್ನ)

ಸೇವುಣ (ಯಾದವ) ಐದನೆಯ ಭಿಲ್ಲಮನ ಚಿನ್ನದ ಪದ್ಮಟಂಕ.









ಹೊಯ್ಸಳರ ನಾಣ್ಯಗಳು (ಚಿನ್ನ)




ಗಂಡಭೇರುಂಡ ಚಿತ್ರವಿರುವ ವಿಜಯನಗರದ ನಾಣ್ಯ (ಚಿನ್ನ)




ಶಿವ ಪಾರ್ವತಿಯರ ಚಿತ್ರವಿರುವ ವಿಜಯನಗರದ ನಾಣ್ಯ (ಚಿನ್ನ)




ವೆಂಕಟೇಶ್ವರನ ಚಿತ್ರವಿರುವ ವಿಜಯನಗರದ ನಾಣ್ಯ (ಚಿನ್ನ)



ಈಶ್ವರನ ಚಿತ್ರವಿರುವ ವಿಜಯನಗರದ ನಾಣ್ಯ (ಚಿನ್ನ)



ಹೈದರನ ಅರ್ಧ ಪಗೋಡ ಶಿವಪಾರ್ವತಿಯರ ಚಿತ್ರವಿರುವ ಚಿನ್ನದ ನಾಣ್ಯ



ಹೈದರಾಲಿಯ ಪೈಸಾ (ತಾಮ್ರ)





ಟಿಪ್ಪುಸುಲ್ತಾನನ ನಾಣ್ಯ : (ತಾಮ್ರ) ಎರಡು ಪೈಸೆ (ಫರೂಕಿ)





ಟಿಪ್ಪುಸುಲ್ತಾನನ ಬೆಳ್ಳಿಯ ನಾಣ್ಯ : ಎರಡು ರೂಪಾಯಿ (ಹೈದರೀ)





ಮುಮ್ಮಡಿ ಕೃಷ್ಣರಾಜ ಒಡೆಯರ ತಾಮ್ರದ ನಾಣ್ಯ (ಮೈಲಿಕಾಲು ಇಪ್ಪತ್ತೈದು)

## ಗೋವಾ ಕದಂಬರ ನಾಣ್ಯಗಳು

ಕದಂಬರಲ್ಲಿ ಅನೇಕ ಶಾಖೆಗಳಿದ್ದವು. ಬನವಾಸಿಯಲ್ಲಿ ಆಳಿದ ಪ್ರಾಚೀನ ಕದಂಬರ ನಾಣ್ಯಗಳ ಪರಿಚಯವನ್ನು ಆಗಲೇ ಮಾಡಿಕೊಂಡಿದ್ದೇವೆ. ಈಗ ಗೋವೆಯಲ್ಲಿ ಮತ್ತು ಹಾನಗಲ್ಲಿನಲ್ಲಿ ಆಳಿದ ಎರಡು ಕದಂಬವಂಶದ ಅರಸು ಗಳ ನಾಣ್ಯಗಳ ಬಗೆಗೆ ಸ್ವಲ್ಪ ತಿಳಿದುಕೊಳ್ಳೋಣ.

ಗೋವದಲ್ಲಿ ಆಳಿದ ಕದಂಬರು ಕಲ್ಯಾಣದ ಚಾಲುಕ್ಯರು, ಹೊಯ್ಸ ಳರು ಮತ್ತು ಸೇವುಣರ ಸಮಕಾಲೀನರೇ ಆಗಿದ್ದರು. ಈ ಕದಂಬರಾಜರಲ್ಲಿ ಮೊದಲನೆಯ, ಎರಡನೆಯ ಮತ್ತು ಮೂರನೆಯ ಜಯಕೇಶಿ, ಶಿವಚಿತ್ತ ಪೆರ್ಮಾಡಿ ಮತ್ತು ಸೋಯಿದೇವ ಮುಖ್ಯರಾದ ದೊರೆಗಳು. ಈ ದೊರೆ ಗಳ ಚಿನ್ನದ ನಾಣ್ಯಗಳು ದೊರಕಿವೆ. ಇವರ ನಾಣ್ಯಗಳು ಮುಂಭಾಗ ಮತ್ತು ಹಿಂಭಾಗ ಎರಡು ಕಡೆಗಳಲ್ಲಿಯೂ ಚಿಹ್ನೆಗಳು ಮತ್ತು ಬರಹಗಳನ್ನು ಹೊಂದಿ ರುತ್ತವೆ. ಸಿಂಹವು ಇವರ ಲಾಂಛನವಾದುದರಿಂದ, ಇವರ ನಾಣ್ಯಗಳ ಮೇಲೆ ಕಾಲನ್ನು ಮೇಲೆತ್ತಿರುವ ಸಿಂಹದ ಚಿತ್ರವಿರುತ್ತದೆ. ಇವರು ಸಪ್ತ ಕೋಟೀಶನ ಆರಾಧಕರು. ಆದುದರಿಂದ ಇವರ ನಾಣ್ಯಗಳ ಮೇಲೆ ಈ ಬರಹ ವನ್ನು ಕಾಣಬಹುದು. ಗೋವದ ಕದಂಬರು 'ಮಲೆಗೆ ಭೈರವ' ಮತ್ತು 'ಮಲವರಮಾರಿ' ಎಂಬ ಬಿರುದಾಂಕಿತರಾಗಿದ್ದರು. ಈ ಬಿರುದುಗಳನ್ನೂ ಅವರ ನಾಣ್ಯಗಳ ಮೇಲೆ ಕಾಣಬಹುದು. ಇವರ ನಾಣ್ಯಗಳ ಮೇಲೆ ರಾಜರ ಹೆಸರೂ ಇರುತ್ತವೆ.

ಮೊದಲನೆಯ ಜಯಕೇಶಿಯ ನಾಣ್ಯಗಳಲ್ಲಿ, ಮುಂಭಾಗದಲ್ಲಿ ಸಿಂಹದ ಚಿತ್ರವೂ ಅದರ ಪಕ್ಕದಲ್ಲಿ ದೇವನಾಗರೀ ಲಿಪಿಯಲ್ಲಿ ಸಂವತ್ಸರದ ಹೆಸರು ಇರುತ್ತವೆ. ಹಿಂಭಾಗದಲ್ಲಿ ದೇವನಾಗರೀ ಲಿಪಿಯಲ್ಲಿ 'ಶ್ರೀ ಸಪ್ತಕೋಟೀಶ ಲಬ್ಧವರ ವೀರ ಜಯಕೇಶೀದೇವ ಮಲವರಮಾರಿ' ಎಂಬ ಐದುಸಾಲಿನ ಬರಹವಿರುತ್ತದೆ. ಇದೇ ದೊರೆಯ ಮತ್ತೊಂದು ನಮೂನೆಯ ನಾಣ್ಯದಲ್ಲಿ ಸಿಂಹದ ಬದಲು ಗಜಸಿಂಹದ ಚಿತ್ರವಿದೆ. ಹಿಂಭಾಗದಲ್ಲಿ ತ್ರಿಶೂಲವು, ಶ್ರೀಮಲೆಗೆ ಭೈರವ ಎಂಬ ಬರಹವೂ ಇದೆ. ಈ ಮೇಲಿನ ಎರಡು ನಾಣ್ಯ ಗಳೂ, ಸುಮಾರು ೭೬ ಗ್ರೇನ್ ತೂಕದ ಚಿನ್ನದ ನಾಣ್ಯಗಳು ಇದೇ ರಾಜನ ಸಣ್ಣ ಮೌಲ್ಯದ ಚಿನ್ನದ ನಾಣ್ಯಗಳೂ ದೊರಕಿವೆ. ಇವುಗಳು ಸುಮಾರು ೪೫ ಗ್ರೇನ್ ತೂಕದವು ಮತ್ತು ಸುಮಾರು ಮೂರನೆಯ ಒಂದು ಅಂಗುಲ

ವ್ಯಾಸವುಳ್ಳವುಗಳಾಗಿವೆ. ಇವುಗಳಲ್ಲಿ 'ಶ್ರೀ ಮಲಪರಮಾರಿ' ಎಂಬ ಬರಹವು ಹಿಂಭಾಗದಲ್ಲಿರುತ್ತದೆ. ಆದರೆ ಮುಂಭಾಗದಲ್ಲಿ ಸ್ವಲ್ಪ ಭಿನ್ನತೆ ಕಂಡುಬರುತ್ತದೆ. ಛತ್ರ, ಅಂಕುಶ, ದೇವಾಲಯದ ಗೋಪುರ ಮುಂತಾದವುಗಳು ಸಿಂಹದ ಜೊತೆಯಲ್ಲಿರುತ್ತವೆ.

ಮೊದಲನೆಯ ಜಯಕೇಶಿಯು ಮೇಲೆ ವರ್ಣಿಸಿದ ನಮೂನೆಯ ನಾಣ್ಯಗಳನ್ನೇ ಅಚ್ಚು ಹಾಕಿದನು. ಈ ನಾಣ್ಯದಲ್ಲಿ ಕಾಣಬರುವ ಸಂವತ್ಸರದ ಆಧಾರದಮೇಲೆ, ಇವು ಎರಡನೆಯ ಜಯಕೇಶಿಯ ನಾಣ್ಯಗಳೆಂದು ಗೊತ್ತಾಗುತ್ತದೆ. ಶಿವಚಿತ್ತರಾಜನ ನಾಣ್ಯಗಳೂ ಇದೇ ನಮೂನೆಗೆ ಸೇರಿದವು. ಆದರೆ ಅವುಗಳಲ್ಲಿ ಶಿವಚಿತ್ತ ಹೆಮ್ಮಾಡಿ ದೇವರ ಮಲಪರಮಾರಿ ಎಂಬ ಬರಹವಿದೆ. ಇದರಿಂದ ಈ ನಾಣ್ಯಗಳು ಇವನಿಂದ ಅಚ್ಚು ಹಾಕಲ್ಪಟ್ಟವು ಎಂದು ಗೊತ್ತಾಗುತ್ತದೆ. ಶಿವಚಿತ್ತನ ಇನ್ನೊಂದು ನಮೂನೆಯ ಚಿನ್ನದ ನಾಣ್ಯವು ಬಹುಮುಖ್ಯವಾದುದು ಮತ್ತು ಗಮನಾರ್ಹವಾದುದು. ಇದರ ಮುಂಭಾಗದಲ್ಲಿ ಸಿಂಹ, ಸ್ವಸ್ತಿಕ ಚಿಹ್ನೆ, ಪ್ಲವ ಎಂಬ ಸಂವತ್ಸರದ ಹೆಸರು ಇವೆ. ಹಿಂಭಾಗದಲ್ಲಿ ಶಿವಚಿತ್ತ ಎಂಬ ಹೆಸರು ನಾಗರೀ ಮತ್ತು ಕನ್ನಡ ಲಿಪಿಗಳಲ್ಲಿ ಕಾಣಬರುತ್ತದೆ. ಮೊದಲನೆಯ, ಮೂರನೆಯ ಮತ್ತು ಐದನೆಯ ಸಾಲು ನಾಗರೀ ಲಿಪಿಯಲ್ಲಿಯೂ, ಎರಡನೆಯ ಮತ್ತು ನಾಲ್ಕನೆಯ ಸಾಲು ಕನ್ನಡ ಲಿಪಿಯಲ್ಲಿಯೂ ಇವೆ. ಸೋಯಿದೇವ ರಾಜನ ನಾಣ್ಯಗಳೂ ಇವರ ಇತರ ನಾಣ್ಯಗಳಂತೆಯೇ ಇವೆ. ಒಟ್ಟಿನಲ್ಲಿ ಹೇಳುವುದಾದರೆ ಗೋವದ ಕದಂಬರ ನಾಣ್ಯಗಳೂ ವೈವಿಧ್ಯಪೂರ್ಣವಾಗಿದ್ದು ಕರ್ನಾಟಕ ನಾಣ್ಯದ ಇತಿಹಾಸದಲ್ಲಿ ಪ್ರಾಮುಖ್ಯವಾದವುಗಳಾಗಿವೆ.

ಹಾನಗಲ್ಲಿನಲ್ಲಿ ಆಳಿದ ಕದಂಬರ ನಾಣ್ಯಗಳು ಹೆಚ್ಚಾಗಿ ದೊರೆತಿಲ್ಲ. ಇವರ ಚಿನ್ನದ ನಾಣ್ಯಗಳು ಪಂಚ್ ನಮೂನೆಗೆ ಸೇರಿದವು. ಇವುಗಳಲ್ಲಿ ಒಂಭತ್ತು ಮುದ್ರೆಗಳಿವೆ. ಮಧ್ಯದ ಮುದ್ರೆಯಲ್ಲಿ ಹನುಮಂತನ ಚಿತ್ರವಿದೆ. ನಾಲ್ಕು ಮುದ್ರೆಗಳಲ್ಲಿ ಸಿಂಹವೂ, ಕನ್ನಡ ಅಕ್ಷರ ಶ್ರೀ ಮತ್ತು ಅಂಕುಶದ ಚಿತ್ರಗಳೂ ಕಾಣಬರುತ್ತವೆ. ಇವು ಹಾನಗಲ್ಲ ಕದಂಬರ ನಾಣ್ಯಗಳೆಂದು ಭಾವಿಸಲಾಗಿದೆ.

ತುಳುನಾಡಿನಲ್ಲಿ ಆಳಿದ ಆಳೂಪರ ಚಿನ್ನದ ನಾಣ್ಯಗಳು ದೊರೆತಿವೆ. ಇವುಗಳಿಗೆ ಪಾಂಡ್ಯ ಗದ್ಯಾಣವೆಂಬ ಹೆಸರೂ ಇದ್ದಿತು. ಇವುಗಳು ಬಾರಕೂರು ಮತ್ತು ಮಂಗಳೂರು ಟಂಕಶಾಲೆಗಳಲ್ಲಿ ಮುದ್ರಿಸಲಾಗುತ್ತಿದ್ದುವ

ರಿಂದ ಅವುಗಳಿಗೆ ಬಾರಕೂರು ಗದ್ಯಾಣ, ಮಂಗಳೂರು ಗದ್ಯಾಣವೆಂಬ ಹೆಸರೂ ಇದ್ದವು. ಈ ನಾಣ್ಯಗಳ ಮೇಲೆ ಎರಡು ಮೀನು, ಚಾಮರ, ದೀಪ ಸ್ತಂಭಗಳೂ, ಹಿಂಬದಿಯಲ್ಲಿ ರಾಜನ ಹೆಸರೂ ಇರುತ್ತವೆ.

## ವಿಜಯನಗರ ನಾಣ್ಯಗಳು

ಕರ್ನಾಟಕದ ಇತಿಹಾಸದಲ್ಲಿ ವಿಜಯನಗರ ಸಾಮ್ರಾಜ್ಯ ಕಾಲವು ಸುವರ್ಣಯುಗವೆನಿಸಿದೆ. ಸರ್ವತೋಮುಖವಾದ ಸಾಂಸ್ಕೃತಿಕ ಸಾಧನೆಗಳಿಂದ ಈ ಕಾಲವು ಭಾರತೀಯ ಇತಿಹಾಸದಲ್ಲಿಯೂ ಪ್ರಮುಖ ಘಟ್ಟವೆನಿಸಿಕೊಂಡಿದೆ. ವಿಜಯನಗರ ಕಾಲದ ಶ್ರೀಮಂತಿಕೆಯು ಶಿಲ್ಪಕಲೆ, ವರ್ಣಚಿತ್ರಕಲೆ, ವಾಸ್ತುಕಲೆ ಮುಂತಾದವುಗಳ ಜೊತೆಗೆ ನಾಣ್ಯಗಳಲ್ಲಿಯೂ ಅಭಿವ್ಯಕ್ತಗೊಂಡಿದೆ. ಈ ಕಾಲವು ಸಮೃದ್ಧವಾಗಿದ್ದಿತೆಂದು ಆ ಕಾಲದಲ್ಲಿ ಇಲ್ಲಿ ಸಂಚಾರಮಾಡಿದ ಇತಿಹಾಸಕಾರರಿಂದ ವರ್ಣಿತವಾಗಿದೆ. ಈ ಮಾತನ್ನು ವಿಜಯನಗರ ಕಾಲದ ಚಿನ್ನದ ನಾಣ್ಯಗಳು ಸಮರ್ಥಿಸುತ್ತವೆ. ಹತ್ತಾರು ನಮೂನೆಯ ಚಿನ್ನದ, ಬೆಳ್ಳಿಯ ಮತ್ತು ತಾಮ್ರದ ನಾಣ್ಯಗಳು ವಿವಿಧ ಮೌಲ್ಯಗಳಲ್ಲಿ ಅಚ್ಚಾಗುತ್ತಿದ್ದುವು. ನಾಣ್ಯಗಳ ಮೇಲಿನ ಬರಹದಲ್ಲಿಯೂ, ಮತ್ತು ಅವುಗಳ ಮೇಲೆ ಇರುತ್ತಿದ್ದ ದೇವತೆಗಳ ಚಿತ್ರದಲ್ಲಿಯೂ ವಿಶೇಷವಾದ ವೈವಿಧ್ಯತೆಯು ಕಾಣಬರುತ್ತದೆ. ವಿಜಯನಗರದ ನಾಣ್ಯಗಳು ಜನಾನುರಾಗಿಯಾಗಿದ್ದುದು ಮಾತ್ರವಲ್ಲದೆ, ಅವು ಕರ್ನಾಟಕದ ಮುಂದಿನ ನಾಣ್ಯಗಳಿಗೆ ಮಾದರಿಯೂ ಆದವು. ನಾಯಕರು, ಪಾಳೆಯಗಾರರು, ಹೈದರ್, ಟಿಪ್ಪೂ ಮುಂತಾದವರ ನಾಣ್ಯಗಳು ವಿಜಯನಗರ ನಾಣ್ಯಗಳಿಂದ ವಿಶೇಷವಾಗಿ ಪ್ರಭಾವಿತಗೊಂಡವು. ಈ ಎಲ್ಲ ಕಾರಣಗಳಿಂದಾಗಿ ವಿಜಯನಗರ ಕಾಲವನ್ನು ಕರ್ನಾಟಕ ನಾಣ್ಯ ಇತಿಹಾಸದಲ್ಲಿಯೂ ಸುವರ್ಣಯುಗವೆಂದು ಕರೆಯಬಹುದು.

ನಾಣ್ಯಪದ್ಧತಿಯಲ್ಲಿ ವಿಶೇಷ ಸುಧಾರಣೆಗಳನ್ನು ವಿಜಯನಗರ ರಾಜರು ಮಾಡಿದರು. ಪ್ರಾಚೀನಕಾಲದಿಂದಲೂ ಕಪ್ಪಕಾಣಿಕೆ, ತೆರಿಗೆಗಳನ್ನು ನಾಣ್ಯ

ರೂಪದಲ್ಲಿಯೂ ಮತ್ತು ಅದಕ್ಕಿಂತ ವಿಶೇಷವಾಗಿ ಧಾನ್ಯರೂಪದಲ್ಲಿ ಕೊಡುವ ಪದ್ಧತಿಯು ಬಳಕೆಯಲ್ಲಿದ್ದಿತು. ಹರಿಹರರಾಜನು ಇದನ್ನು ತಪ್ಪಿಸಿ, ತೆರಿಗೆಗಳನ್ನು ನಾಣ್ಯರೂಪದಲ್ಲಿಯೇ ಸರ್ಕಾರಕ್ಕೆ ಪಾವತಿಮಾಡಬೇಕೆಂದು ವಿಧಿಸಿದನು. ಇದಕ್ಕೆ ತಕ್ಕಂತೆ ಹೊಸ ಮೌಲ್ಯದ ನಾಣ್ಯಗಳನ್ನು ಟಂಕಿಸುವುದು ಅವಶ್ಯಕವಾಯಿತು. ಇದುವರೆವಿಗೂ ಬಳಕೆಯಲ್ಲಿದ್ದ ಪಂಚ್ ಮುದ್ರೆಗಳ ನಾಣ್ಯಗಳನ್ನು ಮುದ್ರಿಸುವುದು ನಿಂತುಹೋಯಿತು. ನಾಣ್ಯಗಳನ್ನು ಖಚಿತವಾದ ರೂಪ ಮತ್ತು ತೂಕದಲ್ಲಿ ಮುದ್ರಿಸುವುದು, ಅವುಗಳ ಮೇಲಿನ ಬರಹ ಮತ್ತು ಚಿಹ್ನೆಗಳ ಮೇಲೆ ಹತೋಟಿಯನ್ನು ಹೊಂದಿರುವುದು ಅವಶ್ಯಕವಾಯಿತು. ಇದರಿಂದ ನಾಣ್ಯಗಳಲ್ಲಿ ಖಚಿತತೆಯು ಪ್ರಾರಂಭವಾಯಿತು. ನಾಣ್ಯಗಳನ್ನು ಮುದ್ರಿಸುವ ಟಂಕಶಾಲೆಗಳ ಮೇಲೆ ಹತೋಟಿಯನ್ನು ಹೊಂದಿರುವ ಅನೇಕ ಅಧಿಕಾರಿಗಳನ್ನು ನೇಮಕಮಾಡಲಾಯಿತು. ಈ ಎಲ್ಲ ಕ್ರಮಗಳಿಂದ ನಾಣ್ಯಗಳಲ್ಲಿ ಸುಧಾರಣೆಗಳುಂಟಾದವು.

ವಿಜಯನಗರದಲ್ಲಿ ಸಂಗಮ, ಸಾಳುವ, ತುಳುವ ಮತ್ತು ಅರವೀಡು ಎಂಬ ನಾಲ್ಕು ವಂಶಗಳ ಅರಸರು ರಾಜ್ಯಭಾರಮಾಡಿದರು. ಈ ಪ್ರತಿಯೊಂದು ವಂಶದ ಅರಸರೂ ತಮ್ಮದೇ ಆದ ದೇವತೆಗಳ ಚಿತ್ರಗಳನ್ನು ತಮ್ಮ ನಾಣ್ಯಗಳ ಮೇಲೆ ಅಚ್ಚು ಹಾಕಿಸಿದ್ದಾರೆ. ಸಂಗಮವಂಶದ ಅರಸುಗಳ ನಾಣ್ಯಗಳಲ್ಲಿ ಹನುಮಂತ, ಗರುಡ, ನಂದಿ, ಆನೆ, ಉಮಾಮಹೇಶ್ವರ, ಲಕ್ಷ್ಮೀನಾರಾಣ, ಸರಸ್ವತಿ, ನರಸಿಂಹ ದೇವರುಗಳ ಚಿತ್ರವಿದೆ. ಸಾಳುವ ವಂಶದ ಅರಸರುಗಳ ನಾಣ್ಯಗಳ ವಿಷಯದಲ್ಲಿ ಹೆಚ್ಚಿಗೆ ತಿಳಿದಿಲ್ಲ. ತುಳುವ ರಾಜರು ಸಿಂಹ, ವೆಂಕಟೇಶ್ವರ, ಬಾಲಕೃಷ್ಣ ಉಮಾಮಹೇಶ್ವರ, ನಂದಿ, ಗಂಡಭೇರುಂಡ, ಗರುಡ, ಲಕ್ಷ್ಮೀನಾರಾಯಣ ಮುಂತಾದ ದೇವತೆಗಳ ಚಿತ್ರಗಳನ್ನು ತಮ್ಮ ನಾಣ್ಯಗಳ ಮೇಲೆ ಬಳಸಿದರು. ಅರವೀಡು ವಂಶದ ನಾಣ್ಯಗಳ ಮೇಲೆ ಶ್ರೀರಾಮ, ಶಂಖ ಮತ್ತು ಚಕ್ರ, ಗರುಡ, ವರಾಹ, ನಂದಿ. ಹನುಮಂತ, ವೆಂಕಟೇಶ ಮುಂತಾದ ದೇವತೆಗಳ ಚಿತ್ರಗಳು ಕಾಣಬರುತ್ತವೆ. ಈ ರಾಜರುಗಳು ಶೈವ ಮತ್ತು ವೈಷ್ಣವ ಧರ್ಮಗಳೆರಡಕ್ಕೂ ಸಮಾನ ಪ್ರೋತ್ಸಾಹ ಕೊಡುತ್ತಿದ್ದರೆಂಬುದು ಅವರು ನಾಣ್ಯಗಳ ಮೇಲೆ ಅಚ್ಚು ಹಾಕಿಸಿರುವ ದೇವತೆಗಳಿಂದ ಸ್ಪಷ್ಟವಾಗುತ್ತದೆ.

ವಿಜಯನಗರದ ನಾಣ್ಯಗಳ ಹಿಂಭಾಗದಲ್ಲಿ ಕಂಡುಬರುವ ಬರಹಗಳಲ್ಲಿಯೂ ವೈವಿಧ್ಯತೆ ಕಂಡುಬರುತ್ತದೆ. ಸಾಮಾನ್ಯವಾಗಿ ಇವರ ನಾಣ್ಯ

ಗಳ ಮೇಲೆ ಕನ್ನಡ, ತೆಲುಗು ಮತ್ತು ನಾಗರೀ ಲಿಪಿಯ ಬರಹಗಳನ್ನು ಕಾಣುತ್ತೇವೆ. ವಿಜಯನಗರ ಸ್ಥಾಪಕರಾದ ಮೊದಲನೆಯ ಹರಿಹರ ಮತ್ತು ಬುಕ್ಕ ರಾಜರುಗಳು ತಮ್ಮ ನಾಣ್ಯಗಳ ಮೇಲೆ ಕನ್ನಡ ಲಿಪಿಯ ಬರಹ ಗಳನ್ನು ಅಚ್ಚುಹಾಕಿಸಿದರು. ಇದರಿಂದ ವಿಜಯನಗರ ಸ್ಥಾಪಕರಿಗೆ ಕನ್ನಡ ದಲ್ಲಿದ್ದ ವಿಶೇಷ ಆಸಕ್ತಿ ವ್ಯಕ್ತವಾಗುತ್ತದೆ. ವಿಜಯನಗರ ಸ್ಥಾಪನೆಗೆ ಕನ್ನಡಿಗರೇ ಮುಖ್ಯ ಕಾರಣರು ಎಂಬ ಸತ್ಯವನ್ನು ಇದು ಸಮರ್ಥಿಸುತ್ತದೆ. ಇಮ್ಮಡಿ ಹರಿಹರ ಮತ್ತು ಇಮ್ಮಡಿ ಬುಕ್ಕರಾಯರ ನಾಣ್ಯಗಳ ಮೇಲೆ ನಂದಿನಾಗರಿ ಲಿಪಿಯ ಬರಹಗಳಿವೆ. ದೇವರಾಯನ ತಾಮ್ರನಾಣ್ಯಗಳಲ್ಲಿ ಕನ್ನಡ ಲಿಪಿಯೂ. ಚಿನ್ನದ ನಾಣ್ಯಗಳಲ್ಲಿ ನಾಗರೀ ಲಿಪಿಯ ಬರಹವೂ ಕಾಣುತ್ತವೆ. ಕೃಷ್ಣದೇವರಾಯನ ನಾಣ್ಯಗಳಲ್ಲಿ ಕನ್ನಡ ಮತ್ತು ನಾಗರೀ ಲಿಪಿಗಳು ಬಳಸಲ್ಪಟ್ಟಿವೆ. ವಿಜಯನಗರದ ಕೊನೆಯ ನಾಣ್ಯಗಳ ಮೇಲೆ ತೆಲುಗು ಲಿಪಿಯ ಬರಹಗಳಿವೆ.

ವಿಜಯನಗರ ಕಾಲದಲ್ಲಿ ಚಿನ್ನ, ಬೆಳ್ಳಿ ಮತ್ತು ತಾಮ್ರಗಳ ವಿವಿಧ ಮೌಲ್ಯಗಳ ನಾಣ್ಯಗಳು ಬಳಕೆಯಲ್ಲಿದ್ದವು. ಆ ಕಾಲದ ಸಾಹಿತ್ಯ ಗ್ರಂಥ ಗಳಿಂದ ಮತ್ತು ಶಾಸನಗಳಿಂದ ಇವುಗಳ ವಿವರಗಳು ತಿಳಿದು ಬರುತ್ತದೆ. ಅನೇಕ ರೀತಿಯ ಚಿನ್ನದ ನಾಣ್ಯಗಳಿದ್ದವು. ಅವುಗಳು ಗದ್ಯಾಣ, ವರಾಹ ಅಥವಾ ಪೊನ್, ಪ್ರತಾಪ, ಕಾಟಿ, ಪಣ ಮತ್ತು ಹಾಗ ; ತಾರ್ ಎಂಬುದು ಬೆಳ್ಳಿಯ ನಾಣ್ಯ. ಪಣ, ಜಿತಲ್ ಮತ್ತು ಕಾಸು ಎಂಬವು ತಾಮ್ರದ ನಾಣ್ಯ ಗಳು. ವಿಜಯನಗರ ಕಾಲದಲ್ಲಿ ಆ ರಾಜ್ಯವನ್ನು ಸಂದರ್ಶಿಸಿದ ಅಬ್ದುಲ್ ರಜಾಕ್ ಎಂಬ ಇತಿಹಾಸಕಾರನ ಬರವಣಿಗೆಯಂತೆ ಈ ನಾಣ್ಯಗಳ ವಿವಿಧ ಮೌಲ್ಯಗಳು ತಿಳಿಯುತ್ತವೆ. ಅದರ ಪ್ರಕಾರ :

೧ ಗದ್ಯಾಣ — ೧ ವರಾಹ
೧ ಪ್ರತಾಪ — ಅರ್ಧ ವರಾಹ
೧ ಪ್ರತಾಪ — ೧೦ ಪಣ
೧ ಪಣ — ೬ ತಾರ್

ಈ ನಾಣ್ಯಗಳಲ್ಲದೆ ಘಟ್ಟಿವರಾಹ, ಶುದ್ಧವರಾಹ, ದೊಡ್ಡವರಾಹ ಎಂಬ ನಾಣ್ಯಗಳ ಹೆಸರೂ ಕಾಣಸಿಗುತ್ತವೆ. ಆದರೆ ಇವುಗಳು ಯಾವ ರೀತಿಯ ನಾಣ್ಯಗಳು ಎಂಬುದು ಖಚಿತವಾಗಿ ತಿಳಿದುಬಂದಿಲ್ಲ.

ಕೃಷ್ಣದೇವರಾಯನ ಕಾಲದಲ್ಲಿ ಆತನ ಆಸ್ಥಾನಕ್ಕೆ ಬಂದಿದ್ದ ಪೇಜ್

ಎಂಬ ಚರಿತ್ರಕಾರನು ಆಗಿನ ಕಾಲದ ನಾಣ್ಯಗಳಿಂದ ಕೊಳ್ಳಬಹುದಾಗಿದ್ದ ಕೆಲವು ಪದಾರ್ಥಗಳನ್ನು ಉದಾಹರಿಸಿದ್ದಾನೆ. ಇದರಿಂದ ಆಗಿನ ಕಾಲದಲ್ಲಿದ್ದ ಬೆಲೆಗಳು ತಿಳಿಯುತ್ತವೆ. ಉದಾಹರಣೆಗೆ ಶ್ರೇಷ್ಠ ದರ್ಜೆಯ ಹತ್ತು ದಾಳಿಂಬೆ ಹಣ್ಣುಗಳಿಗೆ ಒಂದು ಹಣದ ಬೆಲೆ. ಅಂದರೆ ಈಗಿನ ನಾಣ್ಯದಲ್ಲಿ ಹೇಳುವುದಾದರೆ ಸುಮಾರು ಇಪ್ಪತ್ತು ಪೈಸೆಗಳು. ಸುಮಾರು ಈಗಿನ ಎರಡು ರೂಪಾಯಿಗಳಿಗೆ ಹನ್ನೆರಡು ಕುರಿಗಳನ್ನು ಕೊಳ್ಳಬಹುದಾಗಿದ್ದಿತು. ಸುಮಾರು ಹತ್ತು ಪೈಸೆಗಳಿಗೆ ಹನ್ನೆರಡು ಪಾರಿವಾಳಗಳನ್ನು, ಮತ್ತು ಮೂರು ದ್ರಾಕ್ಷಿ ಗೊಂಚಲುಗಳನ್ನು ಕೊಳ್ಳಬಹುದಾಗಿದ್ದಿತು. ಇದರಿಂದ ಈಗಿನ ಕಾಲದ ಬೆಲೆಗಳನ್ನು ಕೃಷ್ಣದೇವರಾಯನ ಕಾಲದ ಬೆಲೆಗಳಿಗೆ ಹೋಲಿಸಿ ನೋಡಿದರೆ, ಈಗ ಸುಮಾರು ಅರವತ್ತರಷ್ಟು ಬೆಲೆಗಳು ಹೆಚ್ಚಾಗಿರುವುದು ನಮ್ಮ ಗಮನಕ್ಕೆ ಬರುತ್ತದೆ. ವಿಜಯನಗರ ಕಾಲದ ಸಂಪತ್ತಿಗೆ, ಸುಭಿಕ್ಷಯುತವಾದ ಸ್ಥಿತಿಗೆ ಪೇಜಸ ಬರವಣಿಗೆಯು ಖಚಿತವಾದ ಮಾಹಿತಿಯನ್ನು ಒದಗಿಸುತ್ತದೆ.

ಇನ್ನು ವಿಜಯನಗರದ ದೊರೆಗಳ ಕೆಲವು ಮುಖ್ಯ ನಾಣ್ಯಗಳನ್ನು ಗಮನಿಸೋಣ. ಮೊದಲನೆಯ ಹರಿಹರ ಮತ್ತು ಬುಕ್ಕರಾಯರು ಹನುಮಂತನ ಚಿತ್ರ ಮತ್ತು ಶ್ರೀ ವೀರ ಹರಿಹರ ಅಥವಾ ಶ್ರೀ ವೀರ ಬುಕ್ಕರಾಯ ಎಂಬ ಕನ್ನಡ ಲಿಪಿಯ ಬರವಣಿಗೆಯುಳ್ಳ ಚಿನ್ನದ ನಾಣ್ಯಗಳನ್ನು ಅಚ್ಚು ಹಾಕಿಸಿದರು. ಇಮ್ಮಡಿ ಹರಿಹರನ ನಾಣ್ಯಗಳಲ್ಲಿ ವೈವಿಧ್ಯತೆಯು ಕಾಣಬರುತ್ತದೆ. ಇವನ ಐದು ರೀತಿಯ ನಾಣ್ಯಗಳನ್ನು ಕಾಣಬಹುದು. ಇವುಗಳಲ್ಲಿ ಹಿಂಭಾಗದಲ್ಲಿ ಶ್ರೀ ಪ್ರತಾಪ ಹರಿಹರ ಎಂಬ ಬರಹವಿದೆ. ಆದರೆ ಮುಂಭಾಗದಲ್ಲಿ ಉಮಾಮಹೇಶ್ವರ, ಲಕ್ಷ್ಮೀನಾರಾಯಣ, ಸರಸ್ವತಿ ಮತ್ತು ಬ್ರಹ್ಮ, ಲಕ್ಷ್ಮೀನರಸಿಂಹ ಮತ್ತು ವೃಷಭದ ಚಿತ್ರಗಳಿರುತ್ತವೆ. ಪಾರ್ವತಿಯೊಂದಿಗೆ ಕುಳಿತಿರುವ ಮಹೇಶ್ವರನ ಚಿತ್ರವು ಬಹು ಚೆನ್ನಾಗಿದೆ. ಮೊದಲನೆಯ ದೇವರಾಯನ ನಾಣ್ಯಗಳಲ್ಲಿಯೂ ಉಮಾಮಹೇಶ್ವರ, ಲಕ್ಷ್ಮೀನಾರಾಯಣ, ನಂದಿ ಮುಂತಾದ ದೇವತೆಗಳ ಚಿತ್ರಗಳು ಕಾಣುತ್ತವೆ. ಎರಡನೆಯ ದೇವರಾಯನ ನಾಣ್ಯಗಳಲ್ಲಿ ಆನೆಯ ಚಿತ್ರವನ್ನು ಹೊಂದಿರುವ ನಾಣ್ಯಗಳೇ ವಿಶೇಷ. ಶ್ರೀ ಪ್ರತಾಪದೇವರಾಯ ಎಂಬ ಬರಹವನ್ನು ಹೊಂದಿರುವ ಇವನ ನಾಣ್ಯಗಳಲ್ಲಿ ಅಲಂಕೃತವಾದ ಆನೆಯ ಚಿತ್ರವು ಕಾಣಬರುತ್ತದೆ. 'ರಾಯ ಗಜಗಂಡಭೇರುಂಡ' ಎಂಬ ಬರಹವಿರುವ ಇವನ ನಾಣ್ಯವು ಗಮನಾರ್ಹವಾದುದು.

## ಕೃಷ್ಣದೇವರಾಯನ ನಾಣ್ಯಗಳು

ವಿಜಯನಗರ ಅರಸರಲ್ಲಿ ಅತಿ ಪ್ರಖ್ಯಾತನಾದ ಕೃಷ್ಣದೇವರಾಯನ ನಾಣ್ಯಗಳು ಕಲಾತ್ಮಕವಾಗಿಯೂ ವೈವಿಧ್ಯತೆಯಿಂದ ಕೂಡಿದವುಗಳೂ ಆಗಿವೆ. ಇವನ ಎರಡು ವರಾಹ, ವರಾಹ, ಅರ್ಧವರಾಹ, ಕಾಲುವರಾಹ, ಹಣ ಮೊದಲಾದ ಚಿನ್ನದ ನಾಣ್ಯಗಳು ಬೆಳಕಿಗೆ ಬಂದಿವೆ. ತಾರ್ ಎಂಬ ಬೆಳ್ಳಿಯ ನಾಣ್ಯ, ಜಿತಲ್ ಎಂಬ ತಾಮ್ರದ ನಾಣ್ಯವೂ ಇವನ ಕಾಲದಲ್ಲಿ ಬಳಕೆಯಲ್ಲಿದ್ದವು. ಕೃಷ್ಣದೇವರಾಯನ ನಾಣ್ಯಗಳಲ್ಲಿ ಐದು ನಮೂನೆಗಳನ್ನು ಕಾಣಬಹುದು. ಅವು ವೆಂಕಟೇಶ್ವರ, ಪಾರ್ವತಿ, ಬಾಲಕೃಷ್ಣ, ವೃಷಭ ಮತ್ತು ಗರುಡ ಚಿತ್ರಗಳನ್ನು ಹೊಂದಿರುವವು. ಈ ಕಾಲದಲ್ಲಿ ತಿರುಪತಿಯ ವೆಂಕಟೇಶ್ವರ ಸ್ವಾಮಿಯ ದೇವಾಲಯವು ವಿಶೇಷ ಖ್ಯಾತಿಯನ್ನು ಗಳಿಸಿದ್ದಿತು. ಕೃಷ್ಣದೇವರಾಯನು ಈ ದೇವಾಲಯಕ್ಕೆ ಅನೇಕ ದತ್ತಿಗಳನ್ನು ಕೊಟ್ಟನು. ಕಿರೀಟಧಾರಿಯಾದ ವೆಂಕಟೇಶ್ವರನು ಶಂಖ ಚಕ್ರಗಳನ್ನು ಕೈಯಲ್ಲಿ ಹಿಡಿದುಕೊಂಡು ಅಲಂಕಾರಯುಕ್ತನಾಗಿ ನಿಂತಿರುವುದು ಈ ನಾಣ್ಯದಲ್ಲಿ ಬಹು ಕಲಾತ್ಮಕವಾಗಿ ಮೂಡಿ ಬಂದಿದೆ. ಈ ನಾಣ್ಯದ ಹಿಂಭಾಗದಲ್ಲಿ ಶ್ರೀ ಕೃಷ್ಣರಾಯ ಎಂಬ ಬರವಣಿಗೆಯಿದೆ. ಕೃಷ್ಣದೇವರಾಯನ ಬಾಲಕೃಷ್ಣ ನಾಣ್ಯವೂ ಗಮನಾರ್ಹವಾದುದು. ಕೈಯಲ್ಲಿ ಬೆಣ್ಣೆಯನ್ನು ಹಿಡಿದುಕೊಂಡು ಅಂಬೆಗಾಲು ಇಡುತ್ತಿರುವ ಬಾಲಕೃಷ್ಣನ ಚಿತ್ರವು ಬಹು ಮುದ್ದಾಗಿದೆ. ಬಾಲಕೃಷ್ಣನು ಕುಳಿತಿರುವ ಭಂಗಿಯಲ್ಲಿ ಅನೇಕ ಭೇದಗಳೂ ಕಾಣಬರುತ್ತವೆ. ಇವನ ಗರುಡ ನಮೂನೆಯ ನಾಣ್ಯಗಳಲ್ಲಿ, ವೀರಾಸನ ಭಂಗಿಯಲ್ಲಿರುವ ಗರುಡನು ಕಿರೀಟಧಾರಿಯಾಗಿ ನಿಂತಿದ್ದಾನೆ. ಕೃಷ್ಣದೇವರಾಯನ ಉಮಾ ಮಹೇಶ್ವರ ಮತ್ತು ನಂದಿ ನಮೂನೆಯ ನಾಣ್ಯಗಳು ಹಿಂದಿನ ಅದೇ ನಮೂನೆಯ ನಾಣ್ಯಗಳಂತೆಯೇ ಇವೆ.

ಅಚ್ಯುತರಾಯನ ನಾಣ್ಯಗಳಲ್ಲಿ ಕಾಣಬರುವ ಗಂಡಭೇರುಂಡ ಗಮನಾರ್ಹವಾದುದು. ಹಾರುತ್ತಿರುವ ಗಂಡಭೇರುಂಡವು ಅಲಂಕೃತವಾಗಿದೆ. ಎರಡು ಕೊಕ್ಕುಗಳಲ್ಲಿ ಆನೆಯನ್ನು ಹಿಡಿದಿದೆ. ಹಿಂಭಾಗದಲ್ಲಿ ಶ್ರೀ ಪ್ರತಾಪ ಅಚ್ಯುತರಾಯ ಎಂಬ ಬರಹವಿದೆ. ಸದಾಶಿವರಾಯನ ನಾಣ್ಯಗಳಲ್ಲಿ ಲಕ್ಷ್ಮೀ ನಾರಾಯಣ, ಉಮಾಮಹೇಶ್ವರ, ಗರುಡ ಮುಂತಾದ ದೇವತೆಗಳ ಚಿತ್ರಗಳಿವೆ. ಹಿಂಭಾಗದಲ್ಲಿ ಶ್ರೀ ಪ್ರತಾಪ ಸದಾಶಿವರಾಯ ಎಂಬ ಬರಹವಿದೆ,

ಅರವೀಡು ವಂಶದ ರಾಜರು ವೈಷ್ಣವರಾಗಿದ್ದರು. ತಿರುಪತಿಯ ವೆಂಕಟೇಶ್ವರನ ಬದಲು ಶ್ರೀರಾಮನನ್ನು ಇವರು ತಮ್ಮ ಮನೆದೇವರಾಗಿ ಮಾಡಿಕೊಂಡರು. ಆದುದರಿಂದ ತಿರುಮಲರಾಯನ ನಾಣ್ಯಗಳಲ್ಲಿ ವೆಂಕಟೇಶ್ವರನ ಚಿತ್ರವು ಕಾಣಬರುವುದಿಲ್ಲ. ಈ ವಂಶದ ತಿರುಮಲರಾಯನ ನಾಣ್ಯಗಳಲ್ಲಿ ಶ್ರೀರಾಮ, ಶಂಖ ಚಕ್ರ, ಗರುಡ, ವರಾಹ, ಆನೆ, ವೃಷಭ, ಲಕ್ಷ್ಮೀಸಮೇತ ವಿಷ್ಣು–ಇವರ ಚಿತ್ರಗಳನ್ನು ಕಾಣುತ್ತೇವೆ. ಶ್ರೀರಾಮನ ಚಿತ್ರವಿರುವ ನಾಣ್ಯಗಳಲ್ಲಿ, ಶ್ರೀರಾಮನು ಸೀತೆಯೊಡನೆ ಕುಳಿತಿದ್ದಾನೆ; ಲಕ್ಷ್ಮಣನು ಹಿಂದೆ ನಿಂತಿದ್ದಾನೆ. ನಾಣ್ಯದ ಹಿಂಭಾಗದಲ್ಲಿ 'ಶ್ರೀ ತಿರುಮಲ ರಾಯಲು' ಎಂಬ ಬರಹವಿದೆ. ಶ್ರೀರಂಗರಾಯ ಮತ್ತು ವೆಂಕಟಪತಿ ರಾಯರ ನಾಣ್ಯಗಳಲ್ಲಿ ವೆಂಕಟೇಶ್ವರನ ಚಿತ್ರವೂ ಕಾಣಬರುತ್ತದೆ.

ವಿಜಯನಗರದ ಪತನಾಂತರ ಹುಟ್ಟಿಕೊಂಡ ಅನೇಕ ಸಣ್ಣ ಪುಟ್ಟ ರಾಜ್ಯಗಳು ವಿಜಯನಗರದ ನಾಣ್ಯಗಳನ್ನೇ ಅನುಕರಿಸಿದುವು. ಈ ಗುಂಪಿಗೆ ಸೇರಿದವೆಂದರೆ ಇಕ್ಕೇರಿ ಮತ್ತು ಚಿತ್ರದುರ್ಗದ ಪಾಳೆಯಗಾರರ ನಾಣ್ಯಗಳು. ಇಕ್ಕೇರಿಯ ಸದಾಶಿವನಾಯಕನ ನಾಣ್ಯಗಳಲ್ಲಿ ಶಿವ ಪಾರ್ವತಿಯರ ಚಿತ್ರವೂ, ಹಿಂಭಾಗದಲ್ಲಿ ಶ್ರೀ ಸದಾಶಿವ ಎಂಬ ನಾಗರೀ ಲಿಪಿಯ ಬರಹವೂ ಇವೆ. ಚಿತ್ರದುರ್ಗದ ನಾಯಕರ ನಾಣ್ಯಗಳ ಒಂದು ಕಡೆಯಲ್ಲಿ ದುರ್ಗಿಯ ಚಿತ್ರವೂ ಇನ್ನೊಂದು ಕಡೆಯಲ್ಲಿ ನಾಯಕರಾಯ ಎಂಬ ನಾಗರೀ ಲಿಪಿಯ ಬರಹವೂ ಕಾಣಬರುತ್ತವೆ. ಈ ರೀತಿಯ ನಾಣ್ಯಗಳನ್ನು ದುರ್ಗಿಪಗೋಡವೆಂದೂ ಕರೆಯುತ್ತಾರೆ. ಪಾಳೆಯಗಾರ ಕೆಂಪೇಗೌಡನ ಚಿನ್ನದ ನಾಣ್ಯಗಳಿಗೆ ಕುಣಿಗಲ್ ಹಣವೆಂದು ಹೆಸರು. ಇವು ಕುಣಿಗಲ್‌ನ ಟಂಕಶಾಲೆಯಲ್ಲಿ ಅಚ್ಚಾದ ನಾಣ್ಯಗಳು.

## ಬಹಮನಿ ನಾಣ್ಯಗಳು

ವಿಜಯನಗರ ಸಾಮ್ರಾಜ್ಯದ ಸಮಕಾಲೀನರೇ ಆದ ಬಹಮನಿ, ಆದಿಲ್ ಶಾಹಿ ಮತ್ತು ಬರೀದ್ ಶಾಹಿ ಸಂತತಿಯ ಮಹಮ್ಮದೀಯ ದೊರೆಗಳು

ಕರ್ನಾಟಕದ ಉತ್ತರಭಾಗಗಳಲ್ಲಿ ರಾಜ್ಯವಾಳುತ್ತಿದ್ದರು. ಈ ದೊರೆಗಳು ದೆಹಲಿಯ ಸುಲ್ತಾನರ ನಾಣ್ಯಗಳನ್ನು ಅನುಕರಿಸಿ ತಮ್ಮ ನಾಣ್ಯಗಳನ್ನು ಅಚ್ಚು ಹಾಕಿಸಿದರು. ಬಹಮನಿ ದೊರೆಗಳು ಚಿನ್ನ, ಬೆಳ್ಳಿ ಮತ್ತು ತಾಮ್ರದ ನಾಣ್ಯಗಳನ್ನು ಟಂಕಿಸಿದರೂ, ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳು ಕಡಿಮೆ, ತಾಮ್ರದ ನಾಣ್ಯಗಳೇ ಹೆಚ್ಚು. ಖಿಲ್ಜಿ ಮತ್ತು ತೊಗಲಕ್ ಮನೆತನದ ನಾಣ್ಯಗಳನ್ನೇ ವಿಶೇಷವಾಗಿ ಅನುಕರಿಸಿದ ಬಹಮನಿ ನಾಣ್ಯಗಳು ೧೭೦, ೧೧೦, ೫೬, ೨೭, ೧೭ ಗ್ರೇನ್ ತೂಕಗಳಲ್ಲಿ ದೊರಕಿವೆ. ಮೊದಲನೆಯ ಬಹಮನ್ ಶಾ ದೊರೆಯು ಖಿಲ್ಜಿ ನಾಣ್ಯಗಳನ್ನೇ ಯಾವ ಬದಲಾವಣೆಯೂ ಇಲ್ಲದೆ ಅಚ್ಚು ಹಾಕಿಸಿದನು. ಆದರೆ ಇವನ ಮಗನಾದ ಮಹಮದ್ ಶಾ ನಾಣ್ಯಗಳಲ್ಲಿ ಹೊಸ ಬದಲಾವಣೆಗಳನ್ನು ಮಾಡಿದನು. ಇವನ ನಾಣ್ಯಗಳಲ್ಲಿ ಬರಹಗಳು ವಿಶೇಷವಾಗಿ ಕಾಣುತ್ತವೆ. 'ಕಾಲ ಮತ್ತು ದೇಶದ ರಾಜ; ದೇವರ ಕಾರಣಕ್ಕಾಗಿ ಸಹಾಯ ಮಾಡುವವನು; ವಿಜಯದ ಪಿತ' ಮುಂತಾದ ಬಿರುದುಗಳನ್ನು ಇವನು ತನ್ನ ನಾಣ್ಯಗಳ ಮೇಲೆ ಅಚ್ಚು ಹಾಕಿಸಿದನು. ಮುಜಾಹಿದ್ ಶಾ ದೊರೆಯ ನಾಣ್ಯಗಳಲ್ಲಿ 'ಖಿಲಾಫತ್‌ನ ಬಲಗೈ ಮತ್ತು ಮುಸ್ಲಿಂ ವಿಧಾಯಕರ ಸಹಾಯಕ' ಎಂಬ ಬರವಣಿಗೆಯನ್ನು ಕಾಣಬಹುದು. ಈ ಬರವಣಿಗೆಯ ಜೊತೆಗೆ ಎಲ್ಲ ಬಹಮನಿ ದೊರೆಗಳೂ ತಮ್ಮ ಹೆಸರನ್ನೂ ನಾಣ್ಯಗಳ ಮೇಲೆ ಅಚ್ಚು ಹಾಕಿಸಿದರು. ಕೆಲವು ರಾಜರುಗಳು ಮಾತ್ರ ತಮ್ಮ ಹೆಸರಿನ ಜೊತೆಗೆ ತಮ್ಮ ತಂದೆ ಮತ್ತು ಅಜ್ಜನ ಹೆಸರನ್ನೂ ನಾಣ್ಯಗಳ ಮೇಲೆ ಮುದ್ರಿಸಿದ್ದಾರೆ. ಸುಮಾರು ಕ್ರಿ. ಶ. ೧೪೯೦ರ ಹೊತ್ತಿಗೆ ಬಹಮನಿ ರಾಜ್ಯವು ಅವನತಿಯನ್ನು ಹೊಂದಿತು. ಆ ನಂತರ ಬಂದ ರಾಜ್ಯಪಾಲರು ಮತ್ತು ಮಂತ್ರಿಗಳೂ ಕೆಲ ಭಾಗಗಳಲ್ಲಿ ಸ್ವತಂತ್ರರಾದರೂ, ತಮ್ಮದೇ ಹೆಸರಿನ ನಾಣ್ಯಗಳನ್ನು ಅಚ್ಚು ಹಾಕಿಸಲಿಲ್ಲ. ಬಹಮನಿಯ ಕೊನೆ ದೊರೆ ಕಲೀಮುಲ್ಲನ ಮರಣಾನಂತರವೂ ಕೆಲಕಾಲ ಬಹಮನಿ ನಾಣ್ಯಗಳೇ ಚಲಾವಣೆಯಲ್ಲಿದ್ದವು.

## ಆದಿಲ್ ಶಾಹಿ ನಾಣ್ಯಗಳು

ಕ್ರಿ. ಶ. ೧೪೮೯ರಲ್ಲಿ ಯೂಸೂಫ್ ಆದಿಲ್ ಖಾನನು ಬಹಮನಿ ರಾಜ್ಯದಿಂದ ಸ್ವತಂತ್ರನಾಗಿ ಆದಿಲ್ ಶಾಹಿ ವಂಶವನ್ನು ಸ್ಥಾಪಿಸಿದನು. ಆದರೆ ಇವನು ಮತ್ತು ಇವನ ಅನಂತರ ಆಳಿದ ಮೂವರು ಸುಲ್ತಾನರು ತಮ್ಮದೇ ಆದ ನಾಣ್ಯಗಳನ್ನು ಅಚ್ಚು ಹಾಕಿಸುವಷ್ಟು ಸಮರ್ಥರಾಗಿರಲಿಲ್ಲ. ಮೊದಲನೆಯ ಆಲಿಯು ಆದಿಲ್ ಶಾಹಿ ನಾಣ್ಯಗಳನ್ನು ಮೊದಲ ಬಾರಿಗೆ ಮುದ್ರಿಸಿದನು. ಇವರ ನಾಣ್ಯಗಳು ವಿಶೇಷವಾಗಿ ತಾಮ್ರದಲ್ಲಿದೆ. ೧೮೦, ೧೨೦ ಮತ್ತು ೬೦ ಗ್ರೇನ್ ತೂಕದ ತಾಮ್ರದ ನಾಣ್ಯಗಳೇ ಜಾಸ್ತಿ. ಇವರ ನಾಣ್ಯಗಳಲ್ಲಿಯೂ ಹಿಂಭಾಗ ಮತ್ತು ಮುಂಭಾಗಗಳಲ್ಲಿ ಬರಹಗಳು ಮತ್ತು ರಾಜನ ಹೆಸರೂ ಇರುತ್ತವೆ. ಮಹಮದ್ ಆದಿಲ್ ಶಾ ತನ್ನ ನಾಣ್ಯದಲ್ಲಿ ಒಂದು ಚಿಕ್ಕ ಪರ್ಷಿಯನ್ ಪದ್ಯವನ್ನೇ ಅಚ್ಚು ಹಾಕಿಸಿದನು. 'ಈ ಪ್ರಪಂಚಕ್ಕೆ ಸೌಂದರ್ಯ ಮತ್ತು ಘನತೆಗಳು ಇಬ್ಬರು ಮುಹಮ್ಮದರಿಂದ ಬಂದಿತು ; ಒಬ್ಬನು ಪ್ರವಾದಿ ಮುಹಮ್ಮದ್ ; ಇನ್ನೊಬ್ಬನು ರಾಜನಾದ ಮುಹಮ್ಮದ್'-ಎಂಬುದೇ ಈ ಪದ್ಯದ ಸಾರಾಂಶ.

ಆದಿಲ್ ಶಾಹಿ ರಾಜರು ಪರ್ಷಿಯನ್ ಖಾರಿಯಲ್ಲಿ ಬಳಕೆಯಲ್ಲಿದ್ದ ಲಾರಿನ್ ನಾಣ್ಯಗಳನ್ನು ವಿಶೇಷವಾಗಿ ಹೋಲುವ ಬೆಳ್ಳಿಯ ನಾಣ್ಯಗಳನ್ನು ಚಲಾವಣೆಗೆ ತಂದರು. ಇದು ಸಾಮಾನ್ಯವಾಗಿ ಉದ್ದವಾದ ಬೆಳ್ಳಿಯ ತುಂಡು ಇದರ ಮಧ್ಯದಲ್ಲಿ ಬರವಣಿಗೆಯಿರುತ್ತದೆ. ಇದು ರಾಜ್ಯದ ಎಲ್ಲ ಕಡೆಯಲ್ಲಿಯೂ ಚಲಾವಣೆಯಲ್ಲಿದ್ದಿತೆ ಅಥವಾ ವ್ಯಾಪಾರಕ್ಕೋಸ್ಕರ ಕೇವಲ ಕರಾವಳಿ ಪ್ರದೇಶದಲ್ಲಿ ಬಳಕೆಯಲ್ಲಿದ್ದಿತೆ ಎಂದು ಹೇಳುವುದು ಕಷ್ಟ.

## ಬರೀದ್ ಶಾಹಿ ನಾಣ್ಯಗಳು

ಕ್ರಿ. ಶ. ೧೪೯೦-೯೧ರಲ್ಲಿ ಬಹಮನಿ ರಾಜರು ಅಶಕ್ತರಾದುದನ್ನು ಗಮನಿಸಿದ ಕಾಸಿಂ ಬರೀದ್ ಎಂಬ ಅಧಿಕಾರಿಯು ಸ್ವತಂತ್ರನಾಗಿ ರಾಜ್ಯಭಾರ

ಮಾಡಲು ಪ್ರಾರಂಭಿಸಿದನು. ಆದರೆ ಇವನಾಗಲೀ ಇವನ ಅನಂತರ ಆಳಿದ ಇಬ್ಬರು ರಾಜರಾಗಲಿ ತಮ್ಮದೇ ಆದ ನಾಣ್ಯಗಳನ್ನು ಅಚ್ಚು ಹಾಕಿಸುವ ಧೈರ್ಯ ಮಾಡಲಿಲ್ಲ. ನಾಲ್ಕನೆಯ ದೊರೆ ಇಬ್ರಾಹಿಂ ಬರೀದನು ತನ್ನ ರಾಜ್ಯ ಭಾರದ ಕೊನೆಯ ಸಮಯದಲ್ಲಿ ತನ್ನದೇ ಆದ ನಾಣ್ಯಗಳನ್ನು ಮುದ್ರಿಸಿದನು. ಇವನು ತನ್ನ ನಾಣ್ಯಗಳ ಮೇಲೆ ಒಂದು ಮುಖದಲ್ಲಿ ಬಹಮನಿ ದೊರೆ ಕಲೀಮುಲ್ಲನ ಹೆಸರನ್ನು ಹಾಗೆಯೇ ಉಳಿಸಿಕೊಂಡು, ಇನ್ನೊಂದು ಮುಖ ದಲ್ಲಿ ಮಾತ್ರ ಸುಲ್ತಾನ ಅಮೀರ್ ಬರೀದ್ ಶಾ ಎಂಬ ತನ್ನ ಹೆಸರನ್ನು ಮುದ್ರಿಸಿದನು. ಸ್ವಲ್ಪ ಕಾಲಾನಂತರ ಬಹಮನಿರಾಜನ ಹೆಸರನ್ನು ತೆಗೆದು ಹಾಕಿ ತನ್ನ ಹೆಸರಿನ ನಾಣ್ಯಗಳನ್ನು ಅಚ್ಚು ಹಾಕಿಸಿದನು. ಇವನ ಅನಂತರ ಆಳಿದ ರಾಜರು ತಮ್ಮ ಹೆಸರುಗಳನ್ನು ನಾಣ್ಯಗಳ ಮೇಲೆ ಹಾಕಿಸದೆ, ಸುಲ್ತಾನ ಅಮೀರ್ ಬರೀದ್ ಶಾ ಎಂಬುದಾಗಿ ಮಾತ್ರ ಅಚ್ಚುಹಾಕಿಸಿದರು. ಬರೀದ್ ಶಾಹಿ ನಾಣ್ಯಗಳು ತಾಮ್ರದಲ್ಲಿವೆ. ೨೮೦, ೧೮೦, ೧೨೫, ೬೦ ಗ್ರೇನ್ ತೂಕದ ದಪ್ಪನೆಯ ತಾಮ್ರದ ನಾಣ್ಯಗಳು ಈವರೆಗೆ ದೊರಕಿವೆ. ಇವರ ಚಿನ್ನದ ಮತ್ತು ಬೆಳ್ಳಿಯ ನಾಣ್ಯಗಳು ಇದುವರೆಗೂ ದೊರಕಿಲ್ಲ. ಅಷ್ಟೇನೂ ಸಮರ್ಪಕವಾಗಿಲ್ಲದ ರಾಜಕೀಯ ಪರಿಸ್ಥಿತಿ, ಕ್ಷೋಭೆ, ದಂಗೆ ಮುಂತಾದವು ಗಳಿಂದ, ಇವರು ಚಿನ್ನದ ನಾಣ್ಯಗಳನ್ನು ಅಚ್ಚು ಹಾಕಿಸಲೇ ಇಲ್ಲ ಎಂದು ಕೆಲವರು ಅಭಿಪ್ರಾಯಪಡುತ್ತಾರೆ.

ಮೊಗಲ್ ದೊರೆ ಔರಂಗಜೇಬನ ಕಾಲದಲ್ಲಿ ಕರ್ನಾಟಕದ ಕೆಲವು ಭಾಗ ಗಳು ಅವನ ಆಡಳಿತಕ್ಕೊಳಪಟ್ಟವು. ಈ ಭಾಗಕ್ಕೆ ಸಿರಾ ರಾಜಧಾನಿಯಾ ಯಿತು. ದೊಡ್ಡಬಳ್ಳಾಪುರ, ಹೊಸಕೋಟೆ, ಗುತ್ತಿ ಮತ್ತು ಕೋಲಾರಗಳು ಸ್ವಲ್ಪಕಾಲ ಮೊಗಲರಿಗೆ ಸೇರಿದ್ದವು. ಈ ಸ್ಥಳಗಳಲ್ಲಿ ಚಿನ್ನದ ಪಣಂ ನಾಣ್ಯ ಗಳನ್ನು ಮುದ್ರಿಸುವ ಟಂಕಶಾಲೆಗಳೂ ಇದ್ದವು. ದೇವನಹಳ್ಳಿ ಮತ್ತು ನಂದಿ ಯಲ್ಲಿ ಅಚ್ಚಾದ ಹಣಗಳೂ ಬೆಳಕಿಗೆ ಬಂದಿವೆ ಇದೇ ರೀತಿಯಲ್ಲಿ ಮರಾಠೆ ಯವರ ಕೆಲವು ನಾಣ್ಯಗಳೂ ಕರ್ನಾಟಕದಲ್ಲಿ ದೊರಕಿವೆ. ಇವೆಲ್ಲವೂ ಭಾರತದ ಇತರ ಕಡೆ ದೊರಕಿರುವ ನಾಣ್ಯಗಳಂತೆಯೇ ಇದ್ದು, ಇಲ್ಲಿಯ ವೈಶಿಷ್ಟ್ಯ ವೇನನ್ನೂ ತೋರಿಸುವುದಿಲ್ಲ.

# ಹೈದರಾಲಿಯ ನಾಣ್ಯಗಳು

ಸಾಮಾನ್ಯ ಅಧಿಕಾರಿಯೊಬ್ಬನ ಮಗನಾಗಿ ಹುಟ್ಟಿದ ಹೈದರಾಲಿಯು ತನ್ನ ಶಕ್ತಿ ಸಾಮರ್ಥ್ಯಗಳಿಂದ ಪ್ರಬಲನಾಗಿ ಹದಿನೆಂಟನೆಯ ಶತಮಾನದ ಕರ್ನಾಟಕದ ರಾಜಕೀಯದಲ್ಲಿ ಪ್ರಮುಖ ಪಾತ್ರ ವಹಿಸಿದನು. ಕ್ರಮ ಕ್ರಮವಾಗಿ ತನ್ನ ಪ್ರಾಬಲ್ಯವನ್ನು ಹೆಚ್ಚಿಸಿಕೊಂಡ ಹೈದರಾಲಿಯು ೧೭೬೩ರಲ್ಲಿ ಬಿದನೂರನ್ನು ತನ್ನ ವಶಮಾಡಿಕೊಂಡು ತನ್ನ ಹೆಸರಿನಲ್ಲಿ ನಾಣ್ಯಗಳನ್ನು ಅಚ್ಚು ಹಾಕಿಸಲು ಮೊದಲು ಮಾಡಿದನು. ಹಿಂದೂ ಚಿಹ್ನೆಯುಳ್ಳ ನಾಣ್ಯಗಳು ಬಳಕೆಯಲ್ಲಿದ್ದುದರಿಂದ, ಅವುಗಳಲ್ಲಿ ವಿಶೇಷ ಬದಲಾವಣೆ ಮಾಡಲು ಹೈದರನು ಒಪ್ಪಲಿಲ್ಲ. ಹೀಗಾಗಿ ಶಿವ ಪಾರ್ವತಿಯರ ಚಿತ್ರಗಳನ್ನುಳ್ಳ ನಾಣ್ಯಗಳನ್ನೇ ಹೈದರಾಲಿಯು ಮುಂದುವರಿಸಿದನು. ಆದರೆ ತನ್ನ ಗುರುತಾಗಿ, ತನ್ನ ಹೆಸರಿನ ಮೊದಲನೆಯ ಅಕ್ಷರವನ್ನು ಅವುಗಳ ಮೇಲೆ ಮುದ್ರಿಸಿದನು.

ಬಹಾದುರೀ ಪಗೋಡಗಳೆಂಬ ನಾಣ್ಯಗಳು ಹೈದರಾಲಿಯ ಕಾಲದಲ್ಲಿ ವಿಶೇಷವಾಗಿ ಚಲಾವಣೆಯಲ್ಲಿದ್ದವು. ಈ ನಾಣ್ಯವು ವಿಜಯನಗರದ ಸದಾಶಿವ ರಾಯನ ನಾಣ್ಯಗಳನ್ನು ಬಹುವಾಗಿ ಹೋಲುತ್ತವೆ. ಇದನ್ನು ಅನುಕರಿಸಿ ಇಕ್ಕೇರಿಯ ಸದಾಶಿವರಾಯನೂ ಇದೇ ರೀತಿಯ ನಾಣ್ಯಗಳನ್ನು ಮುದ್ರಿಸಿದನು. ಹೈದರಾಲಿಯ ನಾಣ್ಯದ ಮುಂಭಾಗದಲ್ಲಿ ಹೆ ಎಂಬ ಅಕ್ಷರವಿದೆ. ಹಿಂಭಾಗದಲ್ಲಿ ತ್ರಿಶೂಲಧಾರಿಯಾದ ಶಿವನು ಪಾರ್ವತಿಯೊಡನೆ ಕುಳಿತಿರುವ ಚಿತ್ರವಿದೆ, ಹೈದರಾಲಿಯ ಅರ್ಧಪಗೋಡ ನಾಣ್ಯಗಳ ಮುಂಭಾಗದಲ್ಲಿ ಹೆ ಎಂಬ ಅಕ್ಷರವಿದೆ. ಹಿಂಭಾಗದಲ್ಲಿ ಚಕ್ರ ಮತ್ತು ಶಂಖಗಳನ್ನು ಹಿಡಿದಿರುವ ವಿಷ್ಣುವಿನ ಚಿತ್ರವಿದೆ. ಈ ರೀತಿಯ ನಾಣ್ಯಗಳು ವಿಜಯನಗರ ಕಾಲದಲ್ಲಿ ಬಳಕೆಯಲ್ಲಿದ್ದವು. ಹೈದರಾಲಿಯು ಎರಡು ರೀತಿಯ ಚಿನ್ನದ ಪಣಗಳನ್ನು ಬಳಕೆಗೆ ತಂದನು. ಮೊದಲನೆಯದು ೫.೫ ಗ್ರೇನ್ ಮತ್ತು ಎರಡನೆಯದು ೨.೭ ಗ್ರೇನ್ ತೂಗುತ್ತವೆ. ಇವುಗಳಲ್ಲಿಯೂ ಶಿವ ಪಾರ್ವತಿಯರ ಚಿತ್ರಗಳು ಕಾಣಬರುತ್ತವೆ. ಜೊತೆಗೆ ಈ ನಾಣ್ಯವು ಅಚ್ಚಾದ ಹಿಜಿರ ವರ್ಷವೂ ಕೊಡಲ್ಪಟ್ಟಿದೆ.

ಹೈದರಾಲಿಯ ತಾಮ್ರದ ಪೈಸೆಗಳು ಅನೇಕ ನಮೂನೆಯಲ್ಲಿವೆ. ಸುಮಾರು ೨೦೦ ಗ್ರೇನ್‌ನಿಂದ ಪ್ರಾರಂಭವಾಗಿ ೧೧ ಗ್ರೇನ್‌ವರೆಗೆ ಅವು ಕಾಣುತ್ತವೆ. ಇವುಗಳನ್ನು ಒಂದು ಪೈಸ, ಅರ್ಧ ಪೈಸ, ಕಾಲು ಪೈಸ,

ಎಂಟನೇ ಒಂದು ಪೈಸ ಎಂದು ವಿಂಗಡಿಸಬಹುದು. ಇವುಗಳ ಹಿಂಭಾಗದಲ್ಲಿ ಆನೆಯ ಚಿತ್ರವಿದೆ. ಹಿಂಭಾಗದಲ್ಲಿ ಟಂಕಶಾಲೆಯ ಹೆಸರು ಮತ್ತು ಹಿಜಿರ ವರ್ಷ ಇದೆ. ಇನ್ನು ಕೆಲವು ನಾಣ್ಯಗಳ ಮುಂಭಾಗದಲ್ಲಿ ಕನ್ನಡದ ಸಂಖ್ಯೆಗಳಿವೆ. ಒಂಬರಿಂದ ಮೂವತ್ತಮೂರರವರೆಗಿನ ಸಂಖ್ಯೆಯನ್ನುಳ್ಳ ನಾಣ್ಯಗಳು ಈವರೆಗೆ ದೊರಕಿವೆ. ಈ ತಾಮ್ರದ ಪೈಸೆಗಳ ಮೇಲಿನ ಬರಹಗಳಿಂದ ಹೈದ ರಾಲಿಯು ಬಿದನೂರು, ಬಳ್ಳಾರಿ, ಗುತ್ತಿ ಕಲ್ಲಿಕೋಟೆ ಮತ್ತು ಶ್ರೀರಂಗ ಪಟ್ಟಣಗಳಲ್ಲಿ ಟಂಕಶಾಲೆಗಳನ್ನು ಸ್ಥಾಪಿಸಿದ್ದನೆಂದು ಗೊತ್ತಾಗುತ್ತದೆ.

## ಟೀಪೂ ಸುಲ್ತಾನನ ನಾಣ್ಯಗಳು

ಮೈಸೂರಿನ ಹುಲಿ ಎಂದು ಇತಿಹಾಸದಲ್ಲಿ ಪ್ರಸಿದ್ಧನಾಗಿರುವ ಟೀಪೂ ಸುಲ್ತಾನನು ಭಾರತೀಯ ನಾಣ್ಯ ಇತಿಹಾಸದಲ್ಲೂ ಗಣ್ಯಸ್ಥಾನವನ್ನು ಪಡೆ ದಿದ್ದಾನೆ. ಇವನ ನಾಣ್ಯಗಳು, ಅವುಗಳ ವೈವಿಧ್ಯತೆ, ಹೊಸ ನಮೂನೆಗಳು, ಅವುಗಳ ಮೇಲಿನ ಬರಹ ಮುಂತಾದ ಗುಣಗಳಿಂದ ಇಂದಿನ ನಾಣ್ಯಶಾಸ್ತ್ರಜ್ಞ ನನ್ನೂ ಅಚ್ಚರಿಗೊಳಿಸುತ್ತದೆ. ಬಹುಶಃ ಭಾರತೀಯ ನಾಣ್ಯ ಇತಿಹಾಸ ದಲ್ಲಿಯೇ ಇಷ್ಟೊಂದು ಶ್ರೀಮಂತವಾದ ನಾಣ್ಯಗಳನ್ನು ಅಚ್ಚು ಹಾಕಿಸಿದ ಮತ್ತೊಬ್ಬ ದೊರೆಯಿಲ್ಲ ಎಂದರೆ ತಪ್ಪಾಗಲಾರದು. ಕೇವಲ ಹದಿನೇಳು ವರ್ಷಗಳ ತನ್ನ ರಾಜ್ಯಭಾರಕಾಲದಲ್ಲಿ, ಯುದ್ಧಗಳ ಜೊತೆಗೆ, ನಾಣ್ಯಗಳ ವಿಷಯದಲ್ಲಿ ಅವನು ತೋರಿದ ಆಸಕ್ತಿ, ಮಾಡಿದ ಸುಧಾರಣೆಗಳು ಅವನು ಶ್ರೇಷ್ಠ ಆಡಳಿತಗಾರನೆಂಬುದನ್ನು ತೋರಿಸುತ್ತದೆ.

ಟೀಪೂ ಸುಲ್ತಾನನ ಕಾಲದಲ್ಲಿ ಕೊನೆಯ ಪಕ್ಷ ಹನ್ನೆರಡು ಟಂಕಶಾಲೆ ಗಳು ಕೆಲಸ ಮಾಡುತ್ತಿದ್ದವು. ಅವುಗಳು ಶ್ರೀರಂಗಪಟ್ಟಣ, ನಗರ, ಗುತ್ತಿ, ಬೆಂಗಳೂರು, ಚಿತ್ರದುರ್ಗ, ಕಲ್ಲಿಕೋಟೆ, ಫರೂಕ್, ಸತ್ಯಮಂಗಲ, ದಿಂಡಿ ಗಲ್, ಗುರ್ರಂಕೊಂಡ, ಧಾರ್ವಾಡ ಮತ್ತು ಮೈಸೂರುಗಳಲ್ಲಿದ್ದವು. ಸಾಮಾನ್ಯವಾಗಿ ಟೀಪೂ ಸುಲ್ತಾನನ ನಾಣ್ಯಗಳ ಮೇಲೆ ಅವುಗಳ ಅಚ್ಚಾದ ಟಂಕಶಾಲೆಗಳ ಹೆಸರು ಇರುತ್ತದೆ. ಟೀಪೂ ಸುಲ್ತಾನನು ತನ್ನ ಹೆಸರನ್ನು

ನಾಣ್ಯಗಳ ಮೇಲೆ ಅಚ್ಚು ಹಾಕಿಸದೆ ಇದ್ದುದು ಆಶ್ಚರ್ಯಕರ ಸಂಗತಿ. ಆದರೆ ಇವನ ಕೆಲವು ಚಿನ್ನ ಮತ್ತು ಬೆಳ್ಳಿಯ ನಾಣ್ಯಗಳ ಮೇಲೆ ಇವನ ತಂದೆ ಹೈದರನ ಮೊದಲನೆ ಅಕ್ಷರ ಕಾಣಬರುತ್ತದೆ. ಇವನು ಮೊಗಲ್ ದೊರೆ ಷಾ ಆಲಮನಿಗೆ ಅಧೀನವೆನಿಸಿದರೂ, ಅವನ ಹೆಸರನ್ನು ತನ್ನ ನಾಣ್ಯಗಳಲ್ಲಿ ಹಾಕಿಸಲಿಲ್ಲ.

ಟೀಪೂ ಸುಲ್ತಾನನು ತನ್ನ ನಾಣ್ಯಗಳ ಮೇಲೆ ಹೊಸ ರೀತಿಯ ಕಾಲವನ್ನು ನಮೂದಿಸುವ ಪದ್ಧತಿಯನ್ನು ಆರಂಭಿಸಿದನು. ಅವನ ರಾಜ್ಯಭಾರದ ಮೊದಲನೆಯ ನಾಲ್ಕು ವರ್ಷಗಳು ಹಿಜಿರ ಕಾಲವನ್ನೇ ಬಳಸಿದನು. ಅನಂತರ ಅವನು ಮೌಲಾದಿ ಎಂಬ ಶಕೆಯನ್ನು ತನ್ನ ನಾಣ್ಯಗಳ ಮೇಲೆ ಬಳಸಲು ಪ್ರಾರಂಭಿಸಿದನು. ಈ ಹೊಸ ಶಕೆಯು ಮೈಸೂರಿನಲ್ಲಿ ಆಗ ಬಳಕೆಯಲ್ಲಿದ್ದ ಹಿಂದೂ ಪಂಚಾಂಗದ ಆಧಾರದ ಮೇಲೆ ರಚಿತವಾಯಿತು. ಪ್ರಭವಾದಿ ಸಂವತ್ಸರಗಳ ಮೇಲೆ ಟೀಪೂ ಸುಲ್ತಾನನು ಈ ಹೊಸ ಶಕೆಯನ್ನು ಆರಂಭಿಸಿ, ಪ್ರತಿಯೊಂದೂ ಹಿಂದೂ ವರ್ಷಕ್ಕೂ ಒಂದೊಂದು ಹೆಸರನ್ನು ಕೊಟ್ಟು, ಅವುಗಳನ್ನೇ ತನ್ನ ನಾಣ್ಯಗಳ ಮೇಲೆ ಅಚ್ಚುಹಾಕಿಸಿದನು. ಅಬ್ಜದ್ ಎಂಬ ಕ್ರಮವನ್ನು ಟೀಪೂ ಸುಲ್ತಾನನು ನಿಲ್ಲಿಸಿ ಅಬ್ತಥ್ ಎಂಬ ಹೊಸ ಕ್ರಮದಲ್ಲಿ ಪ್ರತಿಯೊಂದು ವರ್ಷಕ್ಕೂ ಒಂದು ಮೌಲ್ಯವನ್ನು ಕೊಟ್ಟನು. ಆದೇ ರೀತಿಯಲ್ಲಿ ವರ್ಷದ ಹನ್ನೆರಡು ತಿಂಗಳುಗಳಿಗೂ ಹೆಸರುಗಳನ್ನು ಕೊಟ್ಟನು.

ಟೀಪೂ ಸುಲ್ತಾನನು ಮಾಡಿದ ಮತ್ತೊಂದು ಸುಧಾರಣೆಯೆಂದರೆ, ಪ್ರತಿಯೊಂದು ನಾಣ್ಯಕ್ಕೂ ಅವನು ಕೊಟ್ಟ ಹೆಸರುಗಳು. ಅವುಗಳು ಈ ರೀತಿ ಇವೆ. ನಾಲ್ಕು ಪಗೋಡದ ನಾಣ್ಯ–ಅಹ್ಮದೀ (ಪ್ರವಾದಿ ಮಹಮ್ಮದನ ಹೆಸರು). ಎರಡು ಪಗೋಡದ ನಾಣ್ಯ-ಸದೀಕೀ (ಮೊದಲನೆಯ ಖಲೀಫ), ಒಂದು ಪಗೋಡ-ಫಾರೂಕೀ (ಎರಡನೆಯ ಖಲೀಫ). ಎರಡು ರೂಪಾಯಿ–ಹೈದರೀ, ಒಂದು ರೂಪಾಯಿ–ಇಮಾಮೀ, ಒಂದು ಪೈಸೆ–ಜೋಹ್ರ, ಅರ್ಧ ಪೈಸೆ–ಬಹ್ರಾಮ್, ಎಂಟನೆಯ ಒಂದು ಪೈಸೆ–ಕುತುಬ್ ಇತ್ಯಾದಿ. ಈ ರೀತಿ ಪ್ರತಿಯೊಂದು ನಾಣ್ಯಕ್ಕೂ ಒಂದು ಹೆಸರು ಇರುವುದು ಟೀಪೂ ಸುಲ್ತಾನನ ನಾಣ್ಯಗಳ ವೈಶಿಷ್ಟ್ಯ. ಸಾಮಾನ್ಯವಾಗಿ ಈ ನಾಣ್ಯಗಳ ಹಿಂಭಾಗದಲ್ಲಿ ಈ ಹೆಸರುಗಳು ಕಾಣಬರುತ್ತವೆ.

ಟೀಪೂ ಸುಲ್ತಾನನು ಅಚ್ಚು ಹಾಕಿಸಿದ ಚಿನ್ನದ ನಾಣ್ಯಗಳಲ್ಲಿ ಅಹ್ಮದೀ,

ಸದೀಕೀ. ಪಕೋಡ ಮತ್ತು ಪಣಂ ಮುಖ್ಯವಾದವು. ಅಹ್ಮದೀ ನಾಣ್ಯವು ಸುಮಾರು ೨೦೦ ಗ್ರೇನ್ ತೂಗಿದರೆ ಪಣಂ ನಾಣ್ಯವು ೬ ಗ್ರೇನ್ ತೂಕ ಉಳ್ಳದ್ದಾಗಿತ್ತು. ಅಹ್ಮದೀ ನಾಣ್ಯಗಳಲ್ಲಿ ಅನೇಕ ನಮೂನೆಯಿದ್ದರೂ. ಸಾಮಾನ್ಯವಾಗಿ ಅವು ಒಂದೇ ರೀತಿಗೆ ಸೇರಿದವು. ಇವುಗಳ ಮುಂಭಾಗದಲ್ಲಿ 'ಅಹಮದನ ಧರ್ಮವು ಈ ಪ್ರಪಂಚದಲ್ಲಿ ಹೈದರನ ವಿಜಯಗಳಿಂದ ಪ್ರಕಾಶಿತವಾಗಿದೆ' ಎಂಬ ಬರಹ; 'ಅವನೇ ಸುಲ್ತಾನ, ನ್ಯಾಯವಾದಿ' ಎಂಬ ಬರಹ ಮತ್ತು ವರ್ಷ ಅಚ್ಚಾಗಿವೆ. ಸಾಮಾನ್ಯವಾಗಿ ಎಲ್ಲ ಚಿನ್ನದ ನಾಣ್ಯಗಳಲ್ಲಿಯೂ ಇದೇ ರೀತಿಯ ಬರವಣಿಗೆಯನ್ನು ಕಾಣುತ್ತೇವೆ.

ಟೀಪ್ಪೂಸುಲ್ತಾನನು ಏಳು ರೀತಿಯ ನಾಣ್ಯಗಳನ್ನು ಅಚ್ಚುಹಾಕಿಸಿದನು. ಅವುಗಳು ಎರಡು ರೂಪಾಯಿ, ಒಂದು ರೂಪಾಯಿ, ಅರ್ಧ ರೂಪಾಯಿ, ಕಾಲು ರೂಪಾಯಿ, ಎಂಟನೆಯ ಒಂದು ರೂಪಾಯಿ, ಮತ್ತು ಹದಿನಾರನೆಯ ಒಂದು ರೂಪಾಯಿ. ಇವುಗಳ ಮೇಲೆಯೂ ಬರಹ, ವರ್ಷ, ತಿಂಗಳು, ಮುಂತಾದ ವಿವರಗಳು ಅಚ್ಚು ಹಾಕಿಸಲ್ಪಟ್ಟಿವೆ. ಟೀಪೂ ಸುಲ್ತಾನನ ಐದು ರೀತಿಯ ತಾಮ್ರದ ಪೈಸೆಗಳು ಬೆಳಕಿಗೆ ಬಂದಿವೆ. ಎರಡು ಪೈಸೆ, ಒಂದು ಪೈಸೆ, ಅರ್ಧ ಪೈಸೆ, ಕಾಲು ಪೈಸೆ, ಎಂಟನೆಯ ಒಂದು ಪೈಸೆ ತಾಮ್ರದ ನಾಣ್ಯಗಳು ವಿಶೇಷವಾಗಿ ದೊರಕಿದೆ. ಎರಡು ಪೈಸೆ ನಾಣ್ಯವು ಸುಮಾರು ೩೫೦ ಗ್ರೇನ್ ತೂಕದ್ದಾಗಿದೆ. ಒಂದು ಪೈಸೆ ನಾಣ್ಯವು ಸುಮಾರು ೧೭೫ ಗ್ರೇನ್ ತೂಗುತ್ತದೆ. ಎಂಟನೆಯ ಒಂದು ಪೈಸೆ ನಾಣ್ಯವು ಸಾಮಾನ್ಯವಾಗಿ ಹದಿನೆಂಟರಿಂದ ಇಪ್ಪತ್ತು ಗ್ರೇನ್ ತೂಗುತ್ತದೆ. ಈ ಪೈಸೆ ನಾಣ್ಯಗಳ ಮುಂಭಾಗದಲ್ಲಿ ನಿಂತಿರುವ ಆನೆಯ ಚಿತ್ರವಿದೆ. ಹಿಂಭಾಗದಲ್ಲಿ ನಾಣ್ಯದ ಹೆಸರು ಮತ್ತು ಅದು ಅಚ್ಚಾದ ಟಂಕಶಾಲೆಯ ಹೆಸರುಗಳು ಅಚ್ಚಾಗಿವೆ.

ಟೀಪೂ ಸುಲ್ತಾನನ ನಾಣ್ಯಗಳಲ್ಲಿ ಮೊಗಲ್ ಮತ್ತು ಫ್ರೆಂಚ್ ಪ್ರಭಾವಗಳನ್ನು ಕಾಣಬಹುದು. ನಾಣ್ಯಗಳ ವಿನ್ಯಾಸದಲ್ಲಿ ಅವು ಮೊಗಲ್ ಪರಂಪರೆಯನ್ನು ವ್ಯಕ್ತಪಡಿಸಿದರೆ, ತಾಂತ್ರಿಕ ಲಕ್ಷಣಗಳಲ್ಲಿ ಅವುಗಳಲ್ಲಿ ಫ್ರೆಂಚರ ಪ್ರಭಾವ ಎದ್ದು ಕಾಣುತ್ತದೆ. ಈ ರೀತಿಯ ಪ್ರಭಾವಗಳು ಕಂಡು ಬಂದರೂ, ಹೊಸ ಹೊಸ, ಹತ್ತಾರು ನಾಣ್ಯಗಳ ಕಲ್ಪನೆ, ಅವುಗಳಿಗೆ ಕೊಟ್ಟ ಹೆಸರು ಮುಂತಾದ ವಿಷಯಗಳಲ್ಲಿ ಟೀಪೂ ಸುಲ್ತಾನನ ಸ್ವಯಂ ಪ್ರತಿಭೆ ಎದ್ದು ತೋರುತ್ತದೆ, ಒಟ್ಟಿನಲ್ಲಿ ಹೇಳುವುದಾದರೆ, ಕರ್ನಾಟಕ ನಾಣ್ಯ ಸಂಪತ್ತಿಗೆ ಟೀಪೂ ಸುಲ್ತಾನನ ಕೊಡುಗೆಯು ಮಹತ್ತರವಾದುದು.

## ಮೈಸೂರು ಒಡೆಯರ ನಾಣ್ಯಗಳು

ಮೈಸೂರು ರಾಜ್ಯದ ರಾಜಕೀಯ ಮತ್ತು ಸಾಂಸ್ಕೃತಿಕ ಇತಿಹಾಸದಲ್ಲಿ ಮೈಸೂರು ಒಡೆಯರ್ ಮನೆತನದ ಅರಸುಗಳು ಮಹತ್ತರವಾದ ಪಾತ್ರ ವನ್ನು ವಹಿಸಿ, ನಾಡಿನ ಮುನ್ನಡೆಗೆ ವಿಶೇಷವಾಗಿ ಶ್ರಮಿಸಿದ್ದಾರೆ. ಸುಂದರವೂ ಕಲಾತ್ಮಕವೂ ಆದ ನಾಣ್ಯಗಳನ್ನು ಅಚ್ಚು ಹಾಕಿಸಿ ಕರ್ನಾಟಕ ನಾಣ್ಯ ಸಂಪತ್ತಿನ ಶ್ರೀಮಂತಿಕೆಯನ್ನು ಈ ದೊರೆಗಳು ಹೆಚ್ಚಿಸಿದ್ದಾರೆ. ೧೬೩೮ರಿಂದ ೧೬೫೯ರವರೆಗೆ ರಾಜ್ಯಭಾರ ಮಾಡಿದ ಕಂಠೀರವ ನರಸರಾಜ ಒಡೆಯರು ಮೊಟ್ಟಮೊದಲಿಗೆ ಟಂಕಶಾಲೆಯೊಂದನ್ನು ಸ್ಥಾಪಿಸಿ ನಾಣ್ಯಗಳನ್ನು ಅಚ್ಚು ಹಾಕಿಸಲು ಪ್ರಾರಂಭಿಸಿದರು. ಇವರು ಕೇವಲ ಚಿನ್ನದ ಪಣಂ ನಾಣ್ಯ ಗಳನ್ನು ಮಾತ್ರ ಅಚ್ಚು ಹಾಕಿಸಿದರು. ಇವಕ್ಕೆ ಕಂಠೀರಾಯ ಹಣ ಎಂದು ಹೆಸರಾಯಿತು. ಈ ನಾಣ್ಯದ ಮುಂಭಾಗದಲ್ಲಿ ನರಸಿಂಹದೇವತೆಯ ಚಿತ್ರವೂ, ಹಿಂಭಾಗದಲ್ಲಿ ಸೂರ್ಯ, ಚಂದ್ರ ಮತ್ತು ಶ್ರೀ ಕಂಠೀರಾಯ ಎಂಬ ನಾಗರೀ ಲಿಪಿಯ ಬರವಣಿಗೆಯೂ ಇದೆ. ದಿವಾನ್ ಪೂರ್ಣಯ್ಯನವರು ಇದೇ ರೀತಿಯ ಹಣಗಳನ್ನು ಅಚ್ಚು ಹಾಕಿಸಿದರು. ಈ ಎರಡು ನಾಣ್ಯಗಳಿಗೆ ಭಿನ್ನತೆ ತೋರಿಸಲು ಮೊದಲನೆಯ ನಾಣ್ಯವನ್ನು ಅಗಲ ಕಂಠಿರಾಯ ಹಣವೆಂದೂ, ಎರಡನೆಯ ನಾಣ್ಯವನ್ನು ಗಿಡ್ಡ ಕಂಠೀರಾಯ ಹಣವೆಂದೂ ಕರೆಯ ಲಾಯಿತು.

ಚಿಕ್ಕದೇವರಾಜ ಒಡೆಯರು ವರಾಹ ಮತ್ತು ಹಣಗಳನ್ನು ಅಚ್ಚು ಹಾಕಿಸಿದರು. ಇವರ ವರಾಹ ನಾಣ್ಯಗಳಲ್ಲಿ, ಮುಂಭಾಗದಲ್ಲಿ ಕಾಳಿಂಗಸರ್ಪ ವನ್ನು ಕೊಲ್ಲುತ್ತಿರುವ ಬಾಲಕೃಷ್ಣನ ಚಿತ್ರವೂ, ಹಿಂಭಾಗದಲ್ಲಿ ಶ್ರೀ ಚಿಕ್ಕ ದೇವರಾಯ ಎಂಬ ನಾಗರೀ ಬರಹವೂ ಇವೆ. ಇದೇ ರಾಜರ ಹಣಗಳಲ್ಲಿ ಮುಂಭಾಗದಲ್ಲಿ ಚಾಮುಂಡಿಯ ಚಿತ್ರವಿದೆ.

ಪೂರ್ಣಯ್ಯನವರು ಇಕ್ಕೇರಿ ವರಾಹಗಳನ್ನು ಮತ್ತೆ ಚಲಾವಣೆಗೆ ತಂದರು. ಈ ಹೊಸ ನಾಣ್ಯಕ್ಕೆ ಹೊಸ ಇಕ್ಕೇರಿ ವರಾಹವೆಂದು ಹೆಸರಾ ಯಿತು. ಈ ನಾಣ್ಯದ ಮುಂಭಾಗದಲ್ಲಿ ಶಿವ ಪಾರ್ವತಿಯರ ಚಿತ್ರವೂ, ಹಿಂಭಾಗದಲ್ಲಿ ಶ್ರೀ ಎಂಬ ಅಕ್ಷರವೂ ಇವೆ. ಮುಮ್ಮಡಿ ಕೃಷ್ಣರಾಜ ಒಡೆಯರು ತಮ್ಮ ಹೆಸರಿನಲ್ಲಿ ವರಾಹಗಳನ್ನು ಮುದ್ರಿಸಿದರು. ಇವುಗಳಿಗೆ ಕೃಷ್ಣರಾಜ ವರಾಹವೆಂದು ಹೆಸರು. ಶಿವ ಪಾರ್ವತಿಯರ ಚಿತ್ರಗಳನ್ನು

ಮುಂಭಾಗದಲ್ಲಿಯೂ, ಶ್ರೀಕೃಷ್ಣರಾಜ ಎಂಬ ನಾಗರೀ ಬರಹವನ್ನು ಹೊಂದಿರುವ ಈ ನಾಣ್ಯಗಳು ವಿಶೇಷವಾಗಿ ದೊರಕಿವೆ.

ಈ ಚಿನ್ನದ ನಾಣ್ಯಗಳ ಜೊತೆಗೆ ಒಡೆಯರ್ ವಂಶದ ರಾಜರು ಬೆಳ್ಳಿಯ ನಾಣ್ಯಗಳನ್ನೂ ಮುದ್ರಿಸಿದರು. ಪೂರ್ಣಯ್ಯನವರು ಹಿಂದೆ ಇದ್ದ ಬೆಳ್ಳಿಯ ನಾಣ್ಯಗಳಲ್ಲಿ ವಿಶೇಷ ಬದಲಾವಣೆ ಇಲ್ಲದೆ ಮುದ್ರಿಸಲು ಪ್ರಾರಂಭಿಸಿದರು. ಆ ಕಾಲದಲ್ಲಿ ಪರ್ಷಿಯನ್ ಭಾಷೆಯೇ ಆಡಳಿತ ಭಾಷೆಯಾಗಿದ್ದುದರಿಂದ, ಆ ಕಾಲದ ನಾಣ್ಯಗಳಲ್ಲಿ ಪರ್ಷಿಯನ್ ಬರಹವನ್ನೇ ಕಾಣುತ್ತೇವೆ. ಮೊಗಲ್ ದೊರೆ ಷಾ ಆಲಂನ ಹೆಸರಿನಲ್ಲಿ ರಾಜಾ ರೂಪಾಯಿ ಎಂಬ ಬೆಳ್ಳಿಯ ನಾಣ್ಯವು ಅಚ್ಚಾಯಿತು. ಈ ನಾಣ್ಯದ ಮುಂಭಾಗದಲ್ಲಿ 'ಮಹಮ್ಮದನ ಧರ್ಮದ ರಕ್ಷಕನಾದ ಚಕ್ರವರ್ತಿ ಷಾ ಆಲಂ ಈ ನಾಣ್ಯವನ್ನು ಅಚ್ಚುಹಾಕಿಸಿದನು' ಎಂಬ ಪರ್ಷಿಯನ್ ಬರವಣಿಗೆಯಿದೆ. ಹಿಂಭಾಗದಲ್ಲಿ '೪೭ನೆಯ ಶುಭ ಆಳ್ವಿಕೆಯ ವರ್ಷದಲ್ಲಿ ಮೈಸೂರಿನಲ್ಲಿ ಅಚ್ಚಾದುದು' ಎಂಬ ಬರಹವೂ ಇದೆ.

ಮುಮ್ಮಡಿ ಕೃಷ್ಣರಾಜ ಒಡೆಯರ್ ಇದೇ ರೀತಿಯ ನಾಣ್ಯಗಳನ್ನು ವಿವಿಧ ಮೌಲ್ಯಗಳಲ್ಲಿ ಮುದ್ರಿಸಿದರು. ರಾಜಾ ರೂಪಾಯಿ, ರಾಜಾ ಅರ್ಧ ರೂಪಾಯಿ, ಪಾವಲಿ, ಅದ್ದಹಾಗ ಮತ್ತು ಮಯಿಲಿ ಕಾಸು ಮುಂತಾದ ನಾಣ್ಯಗಳು ಇವರ ಕಾಲದಲ್ಲಿ ಮುದ್ರಿತವಾದವು. ಇವರ ಪಾವಲಿ ನಾಣ್ಯದಲ್ಲಿ ಮುಂಭಾಗದಲ್ಲಿ ಕೃಷ್ಣನ ಚಿತ್ರವೂ, ಹಿಂಭಾಗದಲ್ಲಿ ಕೃಷ್ಣರಾಜ ಒಡೆಯರ್ ಹೆಸರು, ವರ್ಷ ಮತ್ತು ಟಂಕಶಾಲೆಯ ಹೆಸರು ಮುದ್ರಿತವಾಗಿವೆ. ಇವರು ತಾಮ್ರದ ಕಾಸುಗಳನ್ನು ಅನೇಕ ನಮೂನೆಗಳಲ್ಲಿ ಮುದ್ರಿಸಿದರು. ಒಂದು ನಮೂನೆಯ ತಾಮ್ರದ ಕಾಸಿನಲ್ಲಿ ಆನೆ, ಸೂರ್ಯ, ಚಂದ್ರ ಹಿಂಬದಿಯಲ್ಲಿ ಶ್ರೀಕೃಷ್ಣರಾಜ ಎಂಬ ನಾಗರೀ ಲಿಪಿಯ ಬರಹವಿದೆ. ಅನಂತರ ಇವರು ಮಯಿಲಿ ಕಾಸನ್ನು ಬಳಕೆಗೆ ತಂದರು. ಇದರಲ್ಲಿ ಮಯಿಲಿ ಕಾಸು ಎಂಬುದು ಇಂಗ್ಲಿಷ್‌ನಲ್ಲಿಯೂ, ಸ್ವಲ್ಪಕಾಲಾನಂತರ ಕನ್ನಡದಲ್ಲಿಯೂ ಬರೆಯಲ್ಪಟ್ಟಿದೆ. ಎರಡೂ ಲಿಪಿಯ ಬರಹವನ್ನುಳ್ಳ ಕಾಸುಗಳೂ ದೊರಕಿವೆ. ಕೆಲವು ಕಾಸುಗಳಲ್ಲಿ ಮೊದಲು ಕನ್ನಡ ಬರಹವೂ, ಅದರ ಕೆಳಗೆ ಇಂಗ್ಲಿಷ್ ಬರಹವೂ ಇದೆ. ಇವುಗಳಲ್ಲಿ ಚಾಮುಂಡಿ ಮತ್ತು ಕೃಷ್ಣ ಎಂಬ ಕನ್ನಡ ಬರಹಗಳೂ ಇವೆ. ಕಾಲಕ್ರಮದಲ್ಲಿ ಈ ನಾಣ್ಯಗಳಲ್ಲಿ ಆನೆಯ ಬದಲು ಸಿಂಹದ ಚಿತ್ರವೂ ಹಿಂಭಾಗದಲ್ಲಿ ಅಚ್ಚಾಯಿತು. ಈ ನಾಣ್ಯಗಳೆಲ್ಲ ಮೈಸೂರಿನ

ಟಂಕಶಾಲೆಯಲ್ಲೇ ಅಚ್ಚಾದವು. ೧೮೩೩ ರಲ್ಲಿ ಈ ಟಂಕಶಾಲೆಯನ್ನು ಮೈಸೂರಿನಿಂದ ಬೆಂಗಳೂರಿಗೆ ವರ್ಗಾಯಿಸಲಾಯಿತು. ಈ ಟಂಕಶಾಲೆಯಲ್ಲಿ ಅಚ್ಚಾದ ಕೊನೆಯ ನಾಣ್ಯವೆಂದರೆ ಸಿಂಹದ ಚಿತ್ರ, ಅದರ ಮೇಲೆ ಸೂರ್ಯಚಂದ್ರರು ಮತ್ತು ಶ್ರೀ ಎಂಬ ಕನ್ನಡ ಅಕ್ಷರ ; ಕನ್ನಡದಲ್ಲಿ ಕೃಷ್ಣ ಎಂಬ ಬರಹ ಮತ್ತು ಉರ್ದುವಿನಲ್ಲಿ ಮಹಿಸೂರು ಟಂಕಶಾಲೆ ಎಂಬ ಬರಹವನ್ನುಳ್ಳ ನಾಣ್ಯಗಳು. ೧೮೪೩ ರಲ್ಲಿ ಈ ಟಂಕಶಾಲೆಯನ್ನು ಪೂರ್ಣವಾಗಿ ಮುಚ್ಚಲಾಯಿತು. ಅನಂತರ ಮೈಸೂರು ಒಡೆಯರ್ ದೊರೆಗಳ ನಾಣ್ಯಗಳು ಅಚ್ಚಾಗುವುದು ನಿಂತುಹೋಯಿತು. ಇದಾದ ನಂತರ ಈಸ್ಟ್ ಇಂಡಿಯ ಕಂಪೆನಿಯ ನಾಣ್ಯಗಳು ಕರ್ನಾಟಕದಲ್ಲಿ ಚಲಾವಣೆಗೆ ಬಂದವು. ಇವುಗಳಲ್ಲಿ ಕರ್ನಾಟಕದ ವೈಶಿಷ್ಟ್ಯವೇನೂ ಕಾಣಬರುವುದಿಲ್ಲ. ಅನಂತರ ಬ್ರಿಟಿಷ್ ಸರ್ಕಾರದ ನಾಣ್ಯಗಳು ಕರ್ನಾಟಕದಲ್ಲಿ ಬಳಕೆಗೆ ಬಂದವು.

ನಮ್ಮ ದೇಶಕ್ಕೆ ೧೯೪೭ ರಲ್ಲಿ ಸ್ವಾತಂತ್ರ್ಯ ದೊರಕಿದರೂ, ೧೯೫೦ರ ವರೆಗೆ ಬ್ರಿಟಿಷ್ ನಾಣ್ಯಗಳನ್ನೇ ಬಳಸಲಾಯಿತು. ಅನಂತರ ನಮ್ಮ ನಾಣ್ಯಗಳೇ ಕರ್ನಾಟಕದಲ್ಲಿಯೂ ಬಳಕೆಗೆ ಬಂದವು. ಈಗಲೂ ಅವುಗಳೇ ಬಳಕೆಯಲ್ಲಿವೆ. ೧೯೫೦ ರಲ್ಲಿ ಅಶೋಕ ಚಕ್ರವಿರುವ ಮುಂಭಾಗ ಮತ್ತು ಇಂಗ್ಲಿಷ್‌ನಲ್ಲಿ 'ಗವರ್ನಮೆಂಟ್ ಆಫ್ ಇಂಡಿಯ' ಎಂಬ ಬರಹವುಳ್ಳ ರೂಪಾಯಿ, ಅರ್ಧರೂಪಾಯಿ ಮತ್ತು ಕಾಲು ರೂಪಾಯಿಗಳ ನಾಣ್ಯಗಳನ್ನು ಅಚ್ಚುಮಾಡಲಾಯಿತು. ಈ ನಾಣ್ಯಗಳ ಹಿಂಭಾಗದಲ್ಲಿ ನಾಣ್ಯಗಳ ಮೌಲ್ಯವನ್ನು ನಾಗರೀ ಮತ್ತು ಇಂಗ್ಲಿಷ್ ಲಿಪಿಗಳಲ್ಲಿ ಬರೆಯಲಾಯಿತು. ಎರಡು ಆಣೆ, ಒಂದು ಆಣೆ ಮತ್ತು ಅರ್ಧ ಆಣೆಯ ನಾಣ್ಯಗಳ ಮೇಲೆ ನಂದಿಯೂ, ತಾಮ್ರದ ಪೈಸದ ಮೇಲೆ ಹಾರುತ್ತಿರುವ ಕುದುರೆಯೂ ಕಾಣಬರುತ್ತವೆ. ೧೯೫೭ ರಲ್ಲಿ ಭಾರತ ಸರ್ಕಾರವು ನಾಣ್ಯ ಪದ್ಧತಿಯನ್ನು ದಶಮಾಂಶಪದ್ಧತಿಗೆ ಬದಲಾಯಿಸಿತು. ಒಂದು ರೂಪಾಯಿಗೆ ಒಂದು ನೂರು ಪೈಸೆಗಳೆಂದು ಗೊತ್ತುಪಡಿಸಲಾಯಿತು. ೧೦೦, ೫೦, ೨೫, ೧೦, ೫, ೨, ಮತ್ತು ೧, ಪೈಸೆಯ ನಾಣ್ಯಗಳು ಬಳಕೆಗೆ ಬಂದವು. ಈ ದಶಮಾಂಶ ಪದ್ಧತಿಯ ಪೈಸೆಗಳು ಹಿಂದಿನ ಪೈಸೆಗಳಿಗಿಂತ ಭಿನ್ನವಾದುವೆಂದು ತೋರಿಸಲು ಅವುಗಳನ್ನು ನಯೇ ಪೈಸೆ ಎಂದೂ ಕರೆಯಲಾಯಿತು. ಇದು ರೂಢಿಯಾದ ಸ್ವಲ್ಪ ಕಾಲಾನಂತರ, ಅಂದರೆ, ೧೯೬೪ ರಲ್ಲಿ ಅವುಗಳನ್ನು

ಮತ್ತೆ ಪೈಸೆ ಎಂದು ಕರೆಯಲಾಯಿತು. ಈಗ ಇವುಗಳೇ ಬಳಕೆಯಲ್ಲಿವೆ. ಅಲ್ಲಿಂದೀಚೆಗೆ ಅಲ್ಯೂಮಿನಿಯಂ ಮತ್ತು ಇತರ ಮಿಶ್ರಲೋಹಗಳ ಸಣ್ಣ ನಾಣ್ಯಗಳು ಬಳಕೆಗೆ ಬಂದಿವೆ. ೧೯೬೮ ರಲ್ಲಿ ಮಿಶ್ರಲೋಹದ ಒತ್ತಾಳೆಯ ಇಪ್ಪತ್ತು ಪೈಸೆಗಳ ನಾಣ್ಯವು ಬಳಕೆಗೆ ಬಂದಿತು. ಇದರಲ್ಲಿ ಅರಳಿದ ಕಮಲದ ಹೂವು ಬಹಳ ಸುಂದರವಾಗಿ ಅಚ್ಚಾಗಿದ್ದು ಭಾರತೀಯ ಪ್ರಾಚೀನ ಸಂಸ್ಕೃತಿಯನ್ನು ಪ್ರತಿಬಿಂಬಿಸುತ್ತದೆ.

ಇತ್ತೀಚಿನ ನಾಣ್ಯಗಳಲ್ಲಿ ಮುಖ್ಯವಾದವು ಎರಡು. ನೆಹರೂರವರ ಜ್ಞಾಪಕಾರ್ಥವಾಗಿ ಅಚ್ಚುಹಾಕಿಸಿದ ರೂಪಾಯಿ, ೫೦ ಪೈಸೆ ನಾಣ್ಯಗಳು ಮತ್ತು ಮಹಾತ್ಮಾಗಾಂಧಿಯವರ ಜನ್ಮಶತಾಬ್ದಿಯ ಸಮಯದಲ್ಲಿ ಅಚ್ಚಾದ ನಾಣ್ಯಗಳು. ಈ ಎರಡು ನಾಣ್ಯಗಳೂ ಸುಂದರವಾಗಿದ್ದು ಈ ಇಬ್ಬರು ಮಹನೀಯರಿಗೆ ಭಾರತೀಯ ನಾಣ್ಯ ಪರಂಪರೆಯ ಶ್ರದ್ಧಾಂಜಲಿಯಾಗಿದೆ. ಭಾರತಾದ್ಯಂತ ಭಾರತ ಸರ್ಕಾರದ ನಾಣ್ಯಗಳೇ ಚಲಾವಣೆಯಲ್ಲಿರುವುದರಿಂದ, ಅವುಗಳಲ್ಲಿ ಕರ್ನಾಟಕದ ಪ್ರತ್ಯೇಕತೆಯೇನೂ ಕಾಣಬರುವುದಿಲ್ಲ. ಒಟ್ಟಿನಲ್ಲಿ ಹೇಳುವುದಾದರೆ ಸುಮಾರು ಕ್ರಿಸ್ತಪೂರ್ವ ಮೂರನೆಯ ಶತಮಾನದಿಂದ ಪ್ರಾರಂಭವಾಗಿ ಈ ಶತಮಾನದ ಪ್ರಾರಂಭದವರೆಗೂ ಕರ್ನಾಟಕವು ತನ್ನದೇ ಆದ ನಾಣ್ಯಗಳನ್ನು ಮುದ್ರಿಸಿ, ತನ್ನ ವೈಶಿಷ್ಟ್ಯವನ್ನು ಎತ್ತಿ ಹಿಡಿದಿದ್ದಿತು. ನಿಜಕ್ಕೂ ಈ ನಾಣ್ಯಗಳ ಪರಂಪರೆ ಶ್ರೇಷ್ಠವಾದುದು.

## ಅಮೂಲ್ಯ ಆಸ್ತಿ

ಪ್ರಾಚೀನ ನಾಣ್ಯಗಳು ನಮ್ಮ ನಾಡಿನ ಸಾಂಸ್ಕೃತಿಕ ಅಮೂಲ್ಯ ಆಸ್ತಿ. ನಮ್ಮ ನಾಡಿನ ಇತಿಹಾಸ ರಚನೆಗೆ ಅತ್ಯುತ್ತಮ ಸಾಮಗ್ರಿಗಳು. ಈಗ ನಮಗೆ ದೊರಕಿರುವ ನಾಣ್ಯಗಳು ಬಹಳ ಕಡಿಮೆ. ಈಗ ದೊರಕಿರುವುದಕ್ಕಿಂತ ನೂರರಷ್ಟು ನಾಣ್ಯಗಳು ಪ್ರಾಚೀನ ಕರ್ನಾಟಕದಲ್ಲಿ ಚಲಾವಣೆಯಲ್ಲಿದ್ದಿರಬೇಕು. ಆದರೆ ಆ ಎಲ್ಲ ನಾಣ್ಯಗಳೂ ನಮಗೆ ದೊರಕದೇ ಇರುವುದು ದುರದೃಷ್ಟಕರ ಸಂಗತಿ. ಸಾಮಾನ್ಯವಾಗಿ ನಾಣ್ಯಗಳನ್ನು ಮಡಿಕೆ ಕುಡಿಕೆ

ಗಳನ್ನಿಟ್ಟು ನೆಲದಲ್ಲಿ ಹೂತು ಕಾಪಾಡುತ್ತಿದ್ದರು. ಕಾಲಕ್ರಮದಲ್ಲಿ ಅವು ಭೂಮಿಯೊಳಗೇ ಉಳಿದು ಮನೆಯನ್ನು ಕಟ್ಟುವಾಗ, ನೆಲವನ್ನು ಅಗೆದಾಗ ಅವು ಹೊರಬರುತ್ತವೆ. ಈ ರೀತಿಯಲ್ಲಿ ನಾಣ್ಯಗಳು ದೊರಕಿದಾಗ ಸಾಮಾನ್ಯ ಜನಗಳು ಯಾರಿಗೂ ತಿಳಿಯದಂತೆ ಅವುಗಳನ್ನು ಬಚ್ಚಿಟ್ಟು, ಅವುಗಳಲ್ಲಿರುವ ಚಿನ್ನ, ಬೆಳ್ಳಿ ಮುಂತಾದವುಗಳಿಗೋಸ್ಕರ ಗುಟ್ಟಾಗಿ ಕರಗಿಸುತ್ತಾರೆ. ಕರಗಿಸಿದ ನಾಣ್ಯಗಳು ಶಾಶ್ವತವಾಗಿ ಹಾಳಾದಂತೆಯೇ ಸರಿ. ಇದರಿಂದ ನಾಡಿನ ಇತಿಹಾಸ ರಚನೆಗೆ ಉಪಯುಕ್ತವಾದ ಸಾಧನವೊಂದು ಶಾಶ್ವತವಾಗಿ ನಾಶವಾದಂತಾಯಿತು. ಈ ರೀತಿ ನೂರಾರು ನಾಣ್ಯಗಳು ಪ್ರತಿದಿನವೂ ಕರಗಿಸಲ್ಪಡುತ್ತಿವೆ. ಇದು ತಪ್ಪಬೇಕು.

ಪ್ರಾಚೀನ ನಾಣ್ಯಗಳಿಗೆ ಪುರಾತತ್ವ ವಸ್ತು ಸಂಗ್ರಹಾಲಯಗಳಿಂದ ಹೆಚ್ಚು ಬೇಡಿಕೆಗಳಿವೆ. ಪ್ರಾಚೀನ ನಾಣ್ಯಗಳನ್ನು ವಸ್ತು ಸಂಗ್ರಹಾಲಯಗಳು ಕೊಳ್ಳುತ್ತವೆ. ಭೂಮಿಯಲ್ಲಿ ದೊರಕಿದ ನಾಣ್ಯಗಳನ್ನು ಕರಗಿಸದೆ ಅಧಿಕಾರಿಗಳಿಗೆ ತಿಳಿಸಿ ನಮಗೆ ಬರಬೇಕಾದ ಪಾಲನ್ನು ನಾವು ತೆಗೆದುಕೊಂಡು ನಾಣ್ಯಗಳನ್ನು ವಸ್ತು ಸಂಗ್ರಹಾಲಯಗಳಿಗೆ ಕೊಟ್ಟರೆ, ಲಾಭವೂ ಬಂದಂತೆ ಆಗುತ್ತದೆ ಮತ್ತು ಅದಕ್ಕಿಂತ ಮುಖ್ಯವಾಗಿ ಶಾಶ್ವತವಾಗಿ ನಾಣ್ಯಗಳ ವಸ್ತು ಸಂಗ್ರಹಾಲಯದಲ್ಲಿ ಉಳಿಯುವಂತೆ ಆಗುತ್ತದೆ. ಆದುದರಿಂದ ಏನನ್ನೂ ಅರಿಯದ ಜನಗಳಿಗೆ ಇದನ್ನು ತಿಳಿಯ ಹೇಳಿ ಅವು ಉಳಿಯುವಂತೆ ಮಾಡುವುದು ಪ್ರತಿಯೊಬ್ಬರ ಕರ್ತವ್ಯ.

## ನಾಣ್ಯ ಸಂಗ್ರಹ

ವಿದ್ಯಾರ್ಥಿಗಳಲ್ಲಿ ಅನೇಕ ಶೈಕ್ಷಣಿಕ ಹವ್ಯಾಸಗಳಿರುತ್ತವೆ. ಕೆಲವರು ಅಂಚೆ ಚೀಟಿಗಳನ್ನು ಕೂಡಿಹಾಕುತ್ತಾರೆ. ಮತ್ತೆ ಕೆಲವರು ಫೋಟೋಗ್ರಾಫಿಯನ್ನು ತಮ್ಮ ಹವ್ಯಾಸವನ್ನಾಗಿ ಮಾಡಿಕೊಂಡಿರುತ್ತಾರೆ. ಅದೇ ರೀತಿಯಲ್ಲಿ ಪ್ರಾಚೀನ ನಾಣ್ಯಗಳನ್ನು ಸಂಗ್ರಹಿಸುವ ಹವ್ಯಾಸವನ್ನು ವಿದ್ಯಾರ್ಥಿಗಳು ಬೆಳೆಸಿಕೊಳ್ಳಬೇಕು. ಇದೊಂದು ಶೈಕ್ಷಣಿಕ ಮತ್ತು ಸಾಂಸ್ಕೃತಿಕ

ಹವ್ಯಾಸ. ಹಳ್ಳಿಗಳಿಗೆ ಹೋದಾಗ ಹಳೆಯ ಕಾಲದ ನಾಣ್ಯಗಳಿಗೋಸ್ಕರ ವಿಚಾರಿಸಬೇಕು ಮತ್ತು ಹುಡುಕಬೇಕು. ಆ ರೀತಿ ಸಂಗ್ರಹಿಸಿದ ನಾಣ್ಯಗಳನ್ನು ಒಂದೆಡೆ ಕೂಡಿಹಾಕಬೇಕು. ಹೀಗೆ ಕಾಲಕ್ರಮದಲ್ಲಿ ಅದು ಸಂಪದ್ಭರಿತವಾದ ಸಂಗ್ರಹವಾಗುವುದರಲ್ಲಿ ಸಂಶಯವಿಲ್ಲ. ನಮ್ಮ ದೇಶದಲ್ಲಿ ನಾಣ್ಯಗಳ ವಿಷಯದಲ್ಲಿ ಅಧ್ಯಯನ, ಸಂಶೋಧನೆ ಮತ್ತು ನಾಣ್ಯ ಸಂಗ್ರಹ ಮುಂತಾದ ವಿಷಯಗಳಲ್ಲಿ ಆಸಕ್ತರಾದ ಜನರಿಗೆ ಮಾರ್ಗದರ್ಶನ ಮಾಡಲು 'ನ್ಯೂಮಿಸ್‌ಮ್ಯಾಟಿಕ್ ಸೊಸೈಟಿ ಆಫ್ ಇಂಡಿಯ' ಎಂಬ ಸಂಸ್ಥೆಯು ಕಾಶಿ ವಿಶ್ವವಿದ್ಯಾನಿಲಯದಲ್ಲಿ ಕೆಲಸಮಾಡುತ್ತಿದೆ. ಈ ಸಂಸ್ಥೆಯು ನಾಣ್ಯ ಸಂಗ್ರಹಕಾರರಿಗೆ ಬೇಕಾದ ಮಾಹಿತಿಗಳನ್ನು ಒದಗಿಸಿಕೊಡುತ್ತದೆ ಮತ್ತು ಎಲ್ಲ ವಿಧದಲ್ಲಿಯೂ ಸಹಾಯಮಾಡುತ್ತದೆ. ಇದರಿಂದ ದೇಶದಲ್ಲಿ ನಾಣ್ಯ ನಾಶ ಕಡಿಮೆಯಾಗಿ ನಾಣ್ಯ ಸಂಗ್ರಹ ಹೆಚ್ಚಾಗಲಿ ಎಂಬುದೇ ಮುಖ್ಯ ಉದ್ದೇಶ. ಹೀಗಾಗಿ ನಮ್ಮ ಸಾಂಸ್ಕೃತಿಕ ಅವಶೇಷಗಳು ಕಾಪಾಡಲ್ಪಡುತ್ತವೆ. ನಮ್ಮ ನಾಡಿಗೆ ನಾವು ಸಲ್ಲಿಸಬಹುದಾದ ಸೇವೆಗಳಲ್ಲಿ ಇದೂ ಒಂದು ಎನ್ನುವುದರಲ್ಲಿ ಸಂಶಯವಿಲ್ಲ.

